# ಸಿದ್ಧಗಂಗಾ



ಫೆಬ್ರವರಿ, ೧೯೭೮

## ಪ್ರತಿಕ್ರಿಯೆ

ದಿನಾಂಕ 22-2-79 ರಂದು ಶ್ರೀ ಮಠಕ್ಕೆ ಕೇಂದ್ರದ ವಿದೇಶಾಂಗ ಸಚಿವರಾದ ಅಟಲ್ ಬಿಹಾರಿ ವಾಜಪೇಯಿಯವರು ಶ್ರೀ ಶ್ರೀಗಳ ಪುಣ್ಯದರ್ಶನಕ್ಕಾಗಿ ಆಗಮಿಸಿದ್ದರು. ಅಭಿಮಾನಿಗಳ ಕೋರಿಕೆಯ ಮೇರೆಗೆ ಸಚಿವರು ಸುಮಾರು [illegible] ಕಾಲ ಮಾತನಾಡಿದರು.

ನಾನು ಶ್ರೀ ಮಠಕ್ಕೆ ಶ್ರೀಗಳವರ ದಿವ್ಯ ದರ್ಶನಕ್ಕಾಗಿ ಬಂದಿದ್ದೇನೆ. ನಾನಾ ಪುಸ್ತಕಗಳಿಂದ ಪಡೆಯುವ ಜ್ಞಾನಕ್ಕಿಂತಲೂ ಶ್ರೀ ಶ್ರೀಗಳಂಥ ಸಾಧು ಸಂತರ, ಸಿದ್ಧಪುರುಷರ ಸನ್ನಿಧಿಯಿಂದ ಬರುವ ಜ್ಞಾನವು ಅತ್ಯಮೂಲ್ಯವಾದುದು. ಜ್ಞಾನ ವಿಜ್ಞಾನಕ್ಕಿಂತ ಕಡಿಮೆಯೇನಲ್ಲ. ಶರೀರ, ಮನಸ್ಸು, ಆತ್ಮಗಳ ಪೂರ್ಣ ವಿಕಾಸದಿಂದಲೇ ಮಾನವನ ಉದ್ಧಾರ ಸಾಧ್ಯ. ಇಂತಹ ತ್ರಿವಿಧ ಶಿಕ್ಷಣವೂ ಇಲ್ಲಿ ಶ್ರೀ ಮಠದಲ್ಲಿ ದೊರಕುತ್ತದೆ. ಈ ವಿದ್ಯಾಪೀಠದಲ್ಲಿ ಸಾವಿರಾರು ಮಂದಿ ದೇಶದ ನಾನಾ ಮೂಲೆಗಳಿಂದ ಬಂದು ಸೇರಿದ್ದೀರಿ. ಇಂಥ ಈ ಬೃಹತ್ ಸಂಸ್ಥೆ ಉತ್ತರೋತ್ತರಾಭಿವೃದ್ಧಿಯನ್ನು ಪಡೆಯಲೆಂದು ಆಶಿಸುತ್ತೇನೆ. ನಿಮ್ಮ ಅಭಿಮಾನಕ್ಕೆ ತುಂಬಾ ಧನ್ಯವಾದಗಳು.

---

## 'ಸಿದ್ಧಗಂಗಾ' ಚಿರಾಯುವಾಗಲೆಂದು

### ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗ

405. ಶ್ರೀ ಲಕ್ಷ್ಮಣ ಬಿ. ಶೆಟ್ಟಿ,
ಐನಾಪುರ, ಅಥಣಿ ತಾ|| ಬೆಳಗಾಂ ಜಿಲ್ಲೆ

406. ಶ್ರೀ ವಿ. ಕೆ. ಹುಕ್ಕೇರಿ
ನೇರ್ಲಿ, ಹುಕ್ಕೇರಿ ತಾ||, ಬೆಳಗಾಂ ಜಿಲ್ಲೆ

407. ಶ್ರೀ ಆರ್. ಶ್ರೀನಿವಾಸಮೂರ್ತಿ
ಎಂ. ಎಸ್. ಐ. ಲಾರಿ ಮಾಲೀಕರು,
ವಿಜಯಪುರ, ಬೆಂಗಳೂರು ಜಿಲ್ಲೆ

408. ಶ್ರೀ ವೈ. ಬಿ. ವೀರಪ್ಪರೆಡ್ಡಿ, ಕಾರ್ಯದರ್ಶಿ
ಶ್ರೀ ಸತ್ಯನಾರಾಯಣ ಬಾದಿಪೇರ್ಸ್
ಕಮಿಟಿ, ಎಲಿಯೂರು, ದೇವನಹಳ್ಳಿ ತಾ||
ಬೆಂಗಳೂರು ಜಿಲ್ಲೆ

409. ಕುಮಾರಿ ಕೆ.ಹೆಚ್. ಸೀತಾರಾಣಿ
D/O ಡಾ|| ಶ್ರೀ ಹಾಲಪ್ಪ,
ಗಿರಿಜಾ ಹಾಸ್ಪಿಟಲ್.
ಅರಸೀಕೆರೆ, ಹಾಸನ ಜಿಲ್ಲೆ.

410. ಶ್ರೀ ಎಂ. ನಾಗವರ್ಮ
ರಿಸರ್ಚ್ ಫಾರೆಸ್ಟ್ ಆಫೀಸರ್,
ಮಲ್ಲೇಶ್ವರಂ, ಬೆಂಗಳೂರು-55

411. ಶ್ರೀ ಎಸ್. ಆರ್. ರುದ್ರಮೂರ್ತಿ
S/O ಶ್ರೀ ರುದ್ರಮುನಿಯಪ್ಪ,
ಮರ್ಚೆಂಟ್, ದೇವನಹಳ್ಳಿ,
ಬೆಂಗಳೂರು ಜಿಲ್ಲೆ

412. ಶ್ರೀ ಬಿ. ಆರ್. ರೇಣುಕ,
ಚಾಮರಾಜಪೇಟೆ ಬೆಂಗಳೂರು - 18

(ಮುಂದುವರಿಯುತ್ತದೆ)



# ಶ್ರೀವಾಣಿ

ಭಾರತಖಂಡ ವಿದ್ವತ್ತಿಗೆ ಪ್ರಾಮುಖ್ಯತೆಯನ್ನು ಕೊಟ್ಟಂತಹ ರಾಷ್ಟ್ರ. ನಮ್ಮ ಹಿಂದಿನವರು ಆಕಾರದಿಂದ ವ್ಯಕ್ತಿತ್ವವನ್ನು ಅಳೆದವರಲ್ಲ. ಅವರು ಅಂತ ರಂಗವನ್ನು ನೋಡಿ, ವಿದ್ವತ್ತನ್ನು ಕಂಡು ಬೆಲೆಗೊಟ್ಟವರು. ಇದಕ್ಕೆ ಕಥೆಯೊಂದನ್ನು ನಾವು ಸ್ಮರಿಸಬಹುದು. ಒಂದು ಸಾರಿ ಜನಕಮಹಾರಾಜನು ವಿದ್ವಾಂಸರ ಚರ್ಚಾಗೋಷ್ಠಿಯನ್ನೊಡ್ಡಿ ಓಲಗದಲ್ಲಿ ತಾನು ಮಂಡಿಸಿದ್ದನು. ಗೋಷ್ಠಿಯಲ್ಲಿ ಚರ್ಚೆನಡೆಯುತ್ತಿರುವಾಗ ತನ್ಮಧ್ಯೆ 'ಅಷ್ಟವಕ್ರ' ನೆಂಬ ಮಹರ್ಷಿ ಸಭೆಯನ್ನು ಪ್ರವೇಶಿಸಿದ. ಆಗ ಆ ಮಹರ್ಷಿಯ ವಿಕೃತವಾದ ಆಕಾರವನ್ನು ಕಂಡು ಸಭೆಯಲ್ಲಿದ್ದ ವಿದ್ವಾಂಸರು ಅಸಹ್ಯ ಪಟ್ಟು ನಕ್ಕರು. ಕೂಡಲೇ ಋಷಿಯೂ ಅವರೊಂದಿಗೆ ಕೂಡಿ ತಾನೂ ನಕ್ಕನು. ಆಗ 'ನೀನು ಏಕೆ ನಗುತ್ತೀಯೆ' ? -ಎಂಬ ಪ್ರಶ್ನೆ ರಾಜನಿಂದ ಬಂತು. ಆ ರಾಜನ ಪ್ರಶ್ನೆಯಿಂದ ಮುನಿಗೆ ಭಯವುಂಟಾಗಲಿಲ್ಲ; ಮೇಲಾಗಿ ನಿರ್ಭೀತಿಯಿಂದ ತಾನು ಉತ್ತರವನ್ನು ಕೊಟ್ಟ; 'ಈ ಸಭೆಯಲ್ಲಿರುವ ಚಮ್ಮಾರರನ್ನು ನೋಡಿ ನಗುತ್ತಿದ್ದೇನೆ' ಎಂಬುದಾಗಿ. ಪುನಃ 'ಇಲ್ಲಿ ಚಮ್ಮಾರರಾರು ?' ರಾಜನ ಅಸು ಪ್ರಶ್ನೆ. ಅದಕ್ಕೆ ಮಹರ್ಷಿಯು ಮರುಉತ್ತರವಾಗಿ 'ನನ್ನ ಪಾಂಡಿತ್ಯವನ್ನು ಪರಿಶೀಲಿಕಿಸದೆ, ನನ್ನ ಚರ್ಮದ ಆಕಾರಕ್ಕೆ ಬೆಲೆಗೊಟ್ಟ ಚರ್ಮಚಕ್ಷುಗಳಾದ ಇವರೆಲ್ಲರೂ ಚಮ್ಮಾರರೇ' ಎಂದನು ಧೈರ್ಯದಿಂದ. ಈ ಉತ್ತರದಿಂದ ರಾಜರ್ಷಿಯಾದ ಜನಕನು ಸಂತುಷ್ಟಗೊಂಡ. ಮತ್ತು ತನ್ನ ಆಸ್ಥಾನದ ಅಗ್ರ ಪಂಡಿತ ಪದವಿಯನ್ನೂ ಅಷ್ಟವಕ್ರನಿಗೇ ಅನುಗ್ರಹಿಸಿದ.

ಈ ಕಥೆಯ ಹಿನ್ನೆಲೆಯೇನೇಯಿರಲಿ, ನಾವು ವ್ಯಕ್ತಿಯ ಆಕಾರಭೂಷಣಗಳಿಗೆ ಬೆಲೆಗೊಡದೆ, ಅವರಲ್ಲಿರುವ ವಿದ್ವತ್ತಿಗೆ ಪ್ರಾಧಾನ್ಯತೆಯನ್ನು ನೀಡಬೇಕೆಂಬುದಾಗಿ ತಿಳಿಯುತ್ತದೆ.

'ಸಿದ್ಧಗಂಗಾ'

ಫೆಬ್ರವರಿ, ೧೯೭೮

ಸಂಪುಟ-೧೪ ಸಂಚಿಕೆ- ೧

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಸಂಘದ ಪರವಾಗಿ

ಸಂಪಾದಕ ಮಂಡಲಿ
ಪಂ॥ ಚನ್ನಪ್ಪ ಎರೇಸೀಮೆ
ಪಿ. ಎಸ್. ಚಂದ್ರಶೇಖರಯ್ಯ
ವಿರೂಪಾಕ್ಷಯ್ಯ
ಬಸವರಾಜು

ಜಾಹಿರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟನೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ಅಜೀವ ಸದಸ್ಯತ್ವ: **151-00** ರೂ
ವಾರ್ಷಿಕ ಚಂದಾ: **10-00** ರೂ

## ಈ ಸಂಚಿಕೆಯಲ್ಲಿ



❀ ಮುಖಪುಟ ❀

ಭಾರತದ ವಿದೇಶಾಂಗ ಮಂತ್ರಿ ಶ್ರೀ ಎ. ಬಿ. ವಾಜಪೇಯಿಯವರು ಶ್ರೀ ಕ್ಷೇತ್ರಕ್ಕೆ ಭೇಟಿನೀಡಿದಾಗ ಶ್ರೀ ಶ್ರೀಗಳವರೊಡನೆ.

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ 'ಸಿದ್ಧಗಂಗಾ' ಅಗ್ಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

"ಸಂಪಾದಕರು"
"ಸಿದ್ಧಗಂಗಾ" [ಕನ್ನಡ ಮಾಸ ಪತ್ರಿಕೆ]
ಶ್ರೀ ಸಿದ್ಧಗಂಗಾ ಕ್ಷೇತ್ರ-572131 ತುಮಕೂರು ಜಿಲ್ಲೆ
ಇವರಿಗೆ ಕಳಿಸಿ ಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ಮನವಿ

ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿ ಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ-ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ 'ಸಿದ್ಧಗಂಗಾ' ಮುನ್ನೆಡೆಗೆ ಸಹಕರಿಸಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಪ್ರಕಾಶಕರು
'ಸಿದ್ಧಗಂಗಾ' ಮಾಸ ಪತ್ರಿಕೆ, ಸಿದ್ಧಗಂಗಾ ಮಠ-572131 ತುಮಕೂರು ಜಿಲ್ಲೆ

# ನವನೀತ

( ಸಂಸ್ಕೃತ ಶ್ಲೋಕಗಳ ಭಾಷಾನುವಾದ )

ಯೌವನಂ ಧನಸಂಪತ್ತಿಃ ಪ್ರಭುತ್ವಮವಿವೇಕಿತಾ ।
ಏಕೈಕಮಪ್ಯನರ್ಥಾಯ ಕಿಮು ಯತ್ರ ಚತುಷ್ಟಯಮ್ ॥

ಯೌವನದ ಮದ ಬಳಿಕ ಹಣದ ಮದವು
ಅಧಿಕಾರ ಮದ ಮತ್ತೆ ಅವಿವೇಕವು
ಒಂದಿದ್ದರದೆ ಸಾಕು ತೊಂದರೆಯ ತರಲು
ಗತಿಯೇನು ಒಂದೆಡೆಯೆ ಈ ನಾಲ್ಕು ಇರಲು ?

§§  §§

ಗುಣದೋಷೌ ಬುಧೋ ಗೃಹ್ಣನ್ನಿಂದುಕ್ಷ್ವೇಡಾವಿವೇಶ್ವರಃ ।
ಶಿರಸಾ ಶ್ಲಾಘತೇ ಪೂರ್ವಂ ಪರಂ ಕಂಠೇ ನಿಯಚ್ಛತಿ ॥

ಅನ್ಯರೊಳ್ಳಿತು ಮತ್ತು ಕೆಡಕುಗಳನು
ಗ್ರಹಿಸುವನು ಶಿವನಂತೆ ಜ್ಞಾನಿ ತಾನು.
ನೆತ್ತಿಯಲಿ ಶಶಿಯಂತೆ ಒಳ್ಳಿತನ್ನು
ಕತ್ತಿನಲಿ ವಿಷದಂತೆ ದೋಷವನ್ನು.

§§  §§

ವಿದ್ಯಾ ವಿವಾದಾಯ ಧನಂ ಮದಾಯ ಶಕ್ತಿಃ ಪರೇಷಾಂ ಪರಪೀಡನಾಯ ।
ಖಲಸ್ಯ, ಸಾಧೋರ್ವಿಪರೀತ್‌ಮೇತತಜ್ಞಾನಾಯ ದಾನಾಯ ಚ ರಕ್ಷಣಾಯ ॥

ದುರ್ಜನನ ವಿದ್ಯೆ ತಾ ವಾದಕ್ಕೆ ಕಲಹಕ್ಕೆ,
ಐಸಿರಿಯು ಗರ್ವಕ್ಕೆ, ಶಕ್ತಿ ಪರಹಿಂಸೆಗೆ.
ಸಜ್ಜನನ ವಿದ್ಯೆ ತಾ ಸಾಧನವು ಜ್ಞಾನಕ್ಕೆ,
ಸಂಪದವು ದಾನಕ್ಕೆ, ಶಕ್ತಿ ಪರಹಿತಕೆ.

 §§

—"ಕಾವ್ಯ ಸುಧಾಪ್ರಿಯ"

## ಅಮೃತ ಬಿಂದು

"ಮನಸ್ಯೇಕಂ ವಚಸ್ಯೇಕಂ
ಕರ್ಮಣ್ಯೇಕಂ ಮಹಾತ್ಮನಾಂ"

ಮನಸ್ಸಿನಲ್ಲಿ, ಮಾತಿನಲ್ಲಿ ಮತ್ತು ಕಾರ್ಯದಲ್ಲಿ ಒಂದೇ ವಿಧವಾದ ನಡೆವಳಿಕೆಯನ್ನು ಆಚರಣೆಯಲ್ಲಿ ತಂದವರನ್ನು ಮಹಾತ್ಮರೆನ್ನುತ್ತಾರೆ ಬಲ್ಲವರು. ಇಂದು ನಮ್ಮ ಸಮಾಜದಲ್ಲಿ ಎರಡು ಗುಂಪಿನ ಜನರನ್ನು ನೋಡುತ್ತೇವೆ. ಮೊದಲನೆಯ ಗುಂಪಿನ ಜನರೆಂದರೆ, ವೇದಿಕೆಯ ಮೇಲೆ ನಿಂತು ಗಂಟೆಗಟ್ಟಲೆ ದಿನವಹಿ ಉಪನ್ಯಾಸವನ್ನು ಮಾಡುತ್ತಾರೆ. ಇವರದು ಕೇವಲ ಉಪನ್ಯಾಸವೇ ಹೊರತು ನಡವಳಿಕೆಯಲ್ಲಿಲ್ಲ. ಅಂತೂ ಅದೊಂದು ಸಮಯಸ್ಫೂರ್ತಿಯೋ ಮತ್ತಾವುದರ ಪ್ರಭಾವವೋ ಕೇಳುವವರನ್ನೂ ಮರುಳುಗೊಳಿಸಿಬಿಡುತ್ತದೆ. ಯಾರದುರದೃಷ್ಟವೋ ಇಂತಹವರ ಸಂಖ್ಯೆ ಇಂದು ಅಧಿಕವಾಗಿದೆ. ಇನ್ನೂ ಎರಡನೆಯ ಗುಂಪಿನವರೆಂದರೆ, ನುಡಿದಂತೆ ನಡೆಯುವರು. ಒಂದು ಕಾರ್ಯದಸಾಧ್ಯಾಸಾಧ್ಯತೆಯನ್ನು ಕುರಿತು ಮೊದಲೇಆಲೋಚಿಸಿ ಮನಸ್ಸಿನಲ್ಲಿ ನಿರ್ಣಯಿಸಿಕೊಂಡು ಅದನ್ನೇ ಮಾತಿನಲ್ಲಿ ಆಡಿ ತೋರಿಸುತ್ತಾರೆ. ಅವರು ಯಾವುದನ್ನು ನುಡಿಯುತ್ತಾರೋ ಅದನ್ನು ಕಾರ್ಯರೂಪದಲ್ಲಿ ತೋರಿಸುತ್ತಾರೆ. ಇಂದು ಅಂತಹವರ ಸಂಖ್ಯೆ ವಿರಳವಾಗಿದೆ. ಇವರ ನಡೆ ಶುದ್ಧ, ನುಡಿ ಶುದ್ಧ. ಇಂಥವರ ಬದುಕು ನಡೆನುಡಿಗಳ ಸಾಮರಸ್ಯದಿಂದ ಕೂಡಿಸಾಗುತ್ತದೆ. ಇವರದು ನುಡಿದಂತೆ ನಡೆಯುವುದೇ ಜೀವನದ ಅತ್ಯಂತ ಶ್ರೇಷ್ಠತತ್ವವಾಗಿರುತ್ತದೆ. ಈ ಮಹಾನುಭಾವರ ಜೀವನ ಜಗತ್ತಿಗೆ ಮಾರ್ಗದರ್ಶನವಾಗುತ್ತದೆ. ಈ ಮಹಾತ್ಮರನ್ನು ಕಂಡೇ ಅನುಭಾವಿ ಸರ್ವಜ್ಞ ನುಡಿದದ್ದು "ನುಡಿದಂತೆ ನಡೆದಾತ ಕೂತಲ್ಲಿಆಳ್ವ ಜಗವ" ಎಂದು.

—'ದುಂಬಿ'

[ಹಿಂದಿನ ಸಂಚಿಕೆಯಿಂದ]

# ಚೆನ್ನಬಸವೇಶ ಸಾಹಿತ್ಯ

ಲೇ : ವೇದವೇದಾಂತ ವಾಚಸ್ಪತಿ ಟಿ. ಎನ್. ಮಲ್ಲಪ್ಪ ರಿ. ಹೈಕೋರ್ಟ್ ಜಡ್ಜ್, ಬೆಂಗಳೂರು.

**ತ್ರಿವಿಧಲಿಂಗಕಲ್ಪನೆ :**

ಗುರುವು ವೇಧಾ ಮನು ಕ್ರಿಯಾ ದೀಕ್ಷೆಗಳಿಂದ ಶಿಷ್ಯನ ಕಾರಣ, ಸೂಕ್ಷ್ಮ, ಸ್ಥೂಲ ಶರೀರಗಳಲ್ಲಿ ಭಾವ, ಪ್ರಾಣ ಇಷ್ಟಲಿಂಗಗಳನ್ನು ಪ್ರತಿಷ್ಠಿಸಿ ಮಲತ್ರಯಗಳನ್ನು ನಾಶಮಾಡುವನು. **"ತಸ್ಯಭಾಸಾ ಸರ್ವಮಿದಂ ವಿಭಾತಿ"** ಎಂಬ ಮುಂಡಕ ಶ್ರುತಿಯಂತೆ ಪರಂಜ್ಯೋತಿಯಾದ ಹೃದಯಪುಂಡರೀಕದಲ್ಲಿರುವ ಭಾವಲಿಂಗವು ಬೆಳಗಲು ಇಂದ್ರಿಯಗಳೂ ಬೆಳಗಿ ಚೇತನಗೊಳ್ಳುವುವು. ಆ ಪರಂಜ್ಯೋತಿಯಬೆಳಗೇ ಇಂದ್ರಿಯಗಳಿಗೆ ಚೈತನ್ಯವನ್ನು ಕೊಡುವ ಪ್ರಾಣಲಿಂಗ; ಆ ಬೆಳಗನ್ನು ಪ್ರತಿಬಿಂಬಿಸುವ ಕನ್ನಡಿಯೇ ಇಷ್ಟಲಿಂಗ. ಇಷ್ಟಲಿಂಗದ ಮೂಲಕವೇ ಪ್ರಾಣಲಿಂಗದ ಅರಿವೂ, ಅದರ ಅನುಲಕ್ಷ್ಯದಿಂದ ಭಾವಲಿಂಗದ ಅರಿವೂ ಆಗುವುದು. ಇದನ್ನೇ ವಿವರಿಸುವ ಇಷ್ಟಲಿಂಗ ಪ್ರಾಧಾನ್ಯಕೊಡುವ ವಚನವಿದು.

> **ಇಷ್ಟಲಿಂಗವೆಂಬುದನಾರು ಬಲ್ಲರು ? ಇಷ್ಟಲಿಂಗವದು ದರ್ಪಣ; ಪ್ರಾಣಲಿಂಗ ಪ್ರತಿಬಿಂಬ; ದರ್ಪಣವ ಮುಸುಳಿಸಿದರೆ, ಪ್ರಾಣಲಿಂಗವ ಕಾಣಬಹುದೇ ?**
> **ಸಾಕ್ಷಿ: ಇಷ್ಟಲಿಂಗಮ್ ವಿಶ್ವಸ್ಯ ಪ್ರಾಣಲಿಂಗಂ ಸಪಶ್ಯತಿ, ದರ್ಪಣ ಪ್ರತಿಬಿಂಬಾನಾಂ ಯಥಾ ರೂಪಂ ತಥಾಭವೇತ್"**

'ತನ್ನನೆನೋಳ್ಪನೈಸೆ ಲೈಂಗಿಕ ನಿಯಮಾರ್ಚನಾನುಭವದರ್ಪಣದೊಳ್ ಶರಣಂ' –
ಎಂಬ ಮೊಗ್ಗೆಯಮಾಯಿದೇವರ ಅಭಿಪ್ರಾಯವೂ ಇದೇ ಆಗಿದೆ. **"ಹೃದಾಮನೀಷೀಮನಸಾಭಿಕ್ಲುಪ್ತೋಯಂ ಏತದ್ವಿದು: ಅಮೃತಾಃ ತೇಭವಂತಿ"** ಎಂಬ ಕಠೋಪನಿಷತ್ತಿನ ಶ್ರುತಿಯಂತೆ 'ಮನಸಾ' ಎಂದರೆ ಮನಸ್ಸನ್ನು ಇಷ್ಟಲಿಂಗದಲ್ಲಿ ಏಕಾಗ್ರಗೊಳಿಸಿ, 'ಮನೀಷಾ' ಎಂದರೆ ಬುದ್ಧಿಯಿಂದ ಪ್ರಾಣಲಿಂಗಾನುಸಂಧಾನವನ್ನು ಮಾಡಿ, ಭಾವಕ್ಕೆ ಕೇಂದ್ರವಾದ 'ಹೃದಾ' ಎಂದರೆ ಹೃದಯದ ಭಾವದಿಂದ, ಭಾವಲಿಂಗಾನುಸಂಧಾನ ಮಾಡಬೇಕು. **"ತದ್ಭಾವಾತ್ ಬ್ರಹ್ಮೈಕ ಭಾವಾತ್ ತದಾತ್ಮಾತ್"** ಎಂಬ ಶ್ರೀಕರ ಭಾಷ್ಯಾಧಾರವು (೩-೩-೧೪) ಭಾವಲಿಂಗಾನುಸಂಧಾನವೆಂಬುದನ್ನು ಸ್ಪಷ್ಟಪಡಿಸುತ್ತದೆ.

**ಷಟ್‌ಸ್ಥಲ ಸಿದ್ಧಾಂತ :**

ಕೇನೋಪನಿಷತ್ತು **"ಕೇನೇಷಿತಂ ಪತತಿ ಪ್ರೇಷಿತಂ ಮನಃ ?"** ಇತ್ಯಾದಿ ಪ್ರಶ್ನೆಗಳಿಂದ ಪ್ರಾರಂಭವಾಗಿ, ಮನಸ್ಸೇ ಮೊದಲಾದ ಇಂದ್ರಿಯಗಳಿಗೆ ಶಕ್ತಿದಾಯಕವಾದ ಚೈತನ್ಯವನ್ನು **"ಶ್ರೋತ್ರಸ್ಯ ಶ್ರೋತ್ರಂ ಮನಸೋಮನೋಯದ್ ವಾಚೋಹವಾಚಂ"** ಎಂದು ಹೇಳುತ್ತದೆ. ವೀರಶೈವ ಪರಿಭಾಷೆಯಲ್ಲಿ ನಾಸಿಕ, ಜಿಹ್ವೆ, ನೇತ್ರ, ತ್ವಕ್ಕು, ಕರ್ಣ ಮತ್ತು ಭಾವಗಳಲ್ಲಿರುವ ಕೇನೋಕ್ತ ಚೈತನ್ಯಕ್ಕೆ ಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ ಎಂಬ ಹೆಸರಿವೆ. **"ಭದ್ರಂಕರಣೇಭಿಃ ಶ್ರುಣುಯಾಮ, ಭದ್ರಂಪಶ್ಯೇಮ ಅಕ್ಷಭಿಃ"** ಎಂಬಂತಹ ಶ್ರುತಿಗಳಂತೆ ಮೂಸುವುದು, ರುಚಿನೋಡು

ವುದು, ಕಾಣುವುದು, ಸ್ಪರ್ಶಿಸುವುದು, ಕೇಳುವುದು ಭಾವಿಸುವುದು ಎಂಬ ನಮ್ಮ ಎಲ್ಲಾ ಕಾರ್ಯಗಳೂ ಅವುಗಳಿಗೆ ಸಂಬಂಧಪಟ್ಟ, ಅಂಗಗಳಲ್ಲಿರುವ ಆಚಾರಲಿಂಗ' ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಭಾವಲಿಂಗಗಳಿಗೆ ಅರ್ಪಿಸಲು, ಅರ್ಹವಾಗಿರುವುವು ಎಂದರೆ ಮಂಗಳಕರವಾದುವಾಗಿಯೇ ಇರಬೇಕು. ಹಾಗೆಂದಮೇಲೆ ನಾವು ಮಾಡುವ ಕಾರ್ಯಗಳೆಲ್ಲ ಕೆಟ್ಟವಾಗಿರಲು ಸಾಧ್ಯವೇ ಇಲ್ಲ. ಸರ್ವಾಂಗಗಳಲ್ಲೂ ಲಿಂಗಗಳಿರುವುದರಿಂದ ಅವುಗಳಿಗೆ ಅರ್ಪಿಸಲಾಗದುದನ್ನು ಮಾಡಲಾಗುವುದಿಲ್ಲ. ಮಾಡುವುದೆಲ್ಲವನ್ನೂ ಲಿಂಗಪ್ರಸಾದವಾದುದಾಗಿಯೇ ಮಾಡಬೇಕು. ಹಾಗಾದರೆ ಚೆನ್ನಬಸವೇಶನ ವಚನವಿವರಂತೆ ಶರಣನು ಸರ್ವಾಂಗಲಿಂಗ ಪ್ರಸಾದಿ—

> "ನಾಸಿಕವಾಚಾರ [ಲಿಂಗ], ಜಿಹ್ವೆಗುರು [ಲಿಂಗ] ಕಂಗಳು ಶಿವ [ಲಿಂಗ], ತ್ವಕ್ಕು ಜಂಗಮ [ಲಿಂಗ], ಕರ್ಣ ಪ್ರಸಾದ [ಲಿಂಗ], ಭಾವ ಮಹಾ [ಲಿಂಗ], ಕೂಡಲ ಚೆನ್ನ ಸಂಗಯ್ಯ [ಇಂತು ನಿಮ್ಮ ಶರಣ ಸರ್ವಾಂಗಲಿಂಗ ಪ್ರಸಾದಿ"

–ಹೀಗೆ ಮಾಡುವುದೆಲ್ಲವನ್ನೂ ಲಿಂಗಪ್ರಸಾದ ರೂಪವಾಗಿ "ತೇನತ್ಯಕ್ತೇನ ಭುಂಜೀಥಾಃ" ಎಂಬ ಈಶೋಪನಿಷತ್ ಶ್ರುತಿಯಂತೆ ಭೋಗಿಸಬೇಕಾಗುವುದರಿಂದ ಅನರ್ಪಿತವಾದುದು ಎಂದರೆ, ಮಾಡಬಾರದುದು ಏನನ್ನು ಮಾಡಲಾಗುವುದಿಲ್ಲ. ಏನನ್ನು ಮಾಡಬೇಕಾದರೂ, ಅಂಗಗಳಿಂದಲೇ ಮಾಡಬೇಕು. ಅವುಗಳಲ್ಲಿರುವ ಲಿಂಗಗಳಿಗೆ ಅರ್ಪಿತವಾಗಬೇಕು. "ನೆಲತಳವಾರನಾದೊಡೆ ಕಳ್ಳಂಗೆ ಹೋಗಲೆಡೆಯುಂಟೆ? ಸರ್ವಾಂಗಲಿಂಗಿಗೆ ಅನರ್ಪಿತವುಂಟೆ?" ಎಂಬುದೊಂದು ವಚನ.

**ಮೋಕ್ಷೋಪಾಯ :-**

ಶಾಂಕರ ಸಿದ್ಧಾಂತದಂತೆ ದೀಪಹಚ್ಚಿದಕೂಡಲೆ ತಮವು ಹರಿದು ಬೆಳಕಾಗುವ ಹಾಗೆ, ತತ್ತ್ವಮಸ್ಯಾದಿವಾಕ್ಯ ಶ್ರವಣದಿಂದ ಜ್ಞಾನವಾಗಿ ಕೂಡಲೇ ಮೋಕ್ಷವಾಗುವುದು. ಇದಕ್ಕೆ ವಿರುದ್ಧವಾಗಿ ವೀರಶೈವ ಷಟಸ್ಥಲ ಸಿದ್ಧಾಂತದಂತೆ ಮೋಕ್ಷ ಶಿಖರವನ್ನು ಮುಮುಕ್ಷುವು ಹಂತಹಂತವಾಗಿ ಹತ್ತ ಬೇಕು. ಅಂಗನು ಎಂದರೆ ಜೀವನು ಏರುವ ಮೂರು ಮಟ್ಟಗಳು ತ್ಯಾಗಾಂಗ-ಭೋಗಾಂಗ ಮತ್ತು ಯೋಗಾಂಗ ತನುಗುಣವಳಿದಲ್ಲಿ ತ್ಯಾಗಾಂಗ; ಲಿಂಗದೊಡನೆ ಸಕಲ ಸುಖಂಗಳಂ ಭೋಗಿಸುವಲ್ಲಿ ಭೋಗಾಂಗ; ನಿಜದಲ್ಲಿ ಬೆರೆಯಲು ಯೋಗಾಂಗ. ತ್ಯಾಗಾಂಗದಲ್ಲಿ ಭಕ್ತಿಮಹೇಶ್ವರ ಮೆಟ್ಟಲುಗಳೂ, ಭೋಗಾಂಗದಲ್ಲಿ ಪ್ರಸಾದಿ ಪ್ರಾಣಲಿಂಗಿ ಎಂಬ ಮೆಟ್ಟಲುಗಳೂ, ಯೋಗಾಂಗದಲ್ಲಿ ಶರಣ ಐಕ್ಯ ಎಂಬ ಮೆಟ್ಟಲುಗಳೂ ಇವೆ. ಒಟ್ಟಿನಲ್ಲಿ ಶರಣನು ಮೂರು ಮಟ್ಟಗಳಲ್ಲಿ ಷಟ್ ಸ್ಥಲಗಳೆಂಬ ಭಕ್ತಮಹೇಶಾದಿ ಆರು ಮೆಟ್ಟಲುಗಳನ್ನು ಏರಬೇಕು. ಈ ಷಟಸ್ಥಲಗಳೆಂಬ ಆರು ಮೆಟ್ಟಲುಗಳನ್ನು ಏರುವ ಕ್ರಮವನ್ನು ಈ ವಚನವು ಹೇಳುತ್ತದೆ.

> "ವಿಶ್ವಾಸದಿಂದ ಭಕ್ತನಾಗಿ, ವಿಶ್ವಾಸದೊಳಗಣ ನಿಷ್ಠೆಯಿಂ ಮಹೇಶನಾಗಿ, ಆನಿಷ್ಠೆಯೊಳಗಣ ಸಾವಧಾನದಿಂ ಪ್ರಸಾದಿಯಾಗಿ, ಆಸಾವಧಾನದೊಳಗಣ ಸ್ವಾನುಭಾವದಿಂ ಪ್ರಾಣಲಿಂಗಿಯಾಗಿ, ಆಸ್ವಾನುಭಾವದೊಳಗಣ ಅರಿವಿನಿಂ ಶರಣನಾಗಿ, ಆ ಅರಿವು ನಿಜದಲ್ಲಿ ಸಮರಸವೈದಿದೊಡೆ, ಐಕ್ಯಸ್ಥಲ ಗುಹೇಶ್ವರ"

**ಅಷ್ಟಾವರಣಸಿದ್ಧಾಂತ :-**

ಮೋಕ್ಷಮಾರ್ಗದಲ್ಲಿರುವ ಜೀವನೆಂಬ ಯಾತ್ರಿಕನಿಗೆ 'ಗುರುವು' ಮಾರ್ಗದರ್ಶಕನು. 'ಜಂಗಮ' ಸತ್ಸಹವಾಸವು ಮಮತೆಯೆಂಬ ಹಸಿವನ್ನು ಕಳೆಯುವುದು. 'ಪ್ರಸಾದವು' ತಾಪತ್ರಯವೆಂಬ ಬಾಯಾರಿಕೆಯನ್ನು ಪರಿಹರಿಸುವುದು. 'ಪಾದೋದಕ'ವು ವಿಷಯವೆಂಬ ಕಳ್ಳಕಾಕರ ಹಾವಳಿಯನ್ನು ತಪ್ಪಿಸುವುದು. 'ವಿಭೂತಿ' 'ರುದ್ರಾಕ್ಷಿ'ಗಳೆಂಬ ಆಯುಧಗಳನ್ನು ಧರಿಸಿ, ಮನವನ್ನು ಗುರಿಯತ್ತ ಏಕಾಗ್ರಗೊಳಿಸುವ 'ಮಂತ್ರ'ದ ಸಹಾಯದಿಂದ 'ಲಿಂಗ'ವೆಂಬ ಗುರಿಯನ್ನು ಅಂಗವೆಂಬ ಯಾತ್ರಿಕನು ಸುರಕ್ಷಿತವಾಗಿ ಮುಟ್ಟುವನು. ಹೀಗೆ ಗುರಿಯನ್ನು ಮುಟ್ಟಲು ಮೂರು ಮಟ್ಟಗಳಲ್ಲಿನ ಆರು ಮೆಟ್ಟಲುಗಳನ್ನು ಏರಬೇಕಾಗುವುದು. ಭಕ್ತಿ ಮತ್ತು ಅದರ ನಿಷ್ಠೆಯಿಂದ 'ಭಕ್ತಮಹೇಶ' ಎಂಬ ಮೆಟ್ಟಲುಗಳುಳ್ಳ 'ತ್ಯಾಗಾಂಗ'ವೆಂಬ ಮಟ್ಟವನ್ನೂ ಲಿಂಗಾರ್ಪಿತವಾದುದನ್ನೇ ಭೋಗಿಸಿ ಪ್ರಾಣಕ್ಕೆ ಪ್ರಾಣವಾಗಿ ಎಚ್ಚರದಪ್ಪದೆ 'ಪ್ರಸಾದಿಪ್ರಾಣಲಿಂಗಿ' ಎಂಬ ಮೆಟ್ಟಲುಗಳುಳ್ಳ 'ಭೋಗಾಂಗ'ವೆಂಬ ಮಟ್ಟವನ್ನು, ಶರಣ ಸತಿ ಲಿಂಗಪತಿ ಭಾವದಿಂದಲೂ, ಅಂತ್ಯದಲ್ಲಿ ಅಭೇದ ಭಾವದಿಂದ 'ಶರಣಐಕ್ಯ' ಎಂಬ ಮೆಟ್ಟಲುಗಳುಳ್ಳ 'ಯೋಗಾಂಗ'ವೆಂಬ ಮಟ್ಟವನ್ನು ಮುಮುಕ್ಷುವು ಏರಿ, ಜೀವನ್ಮುಕ್ತನಾಗುವನು.

## ಪ್ರಣವಸೃಷ್ಟಿ :-

ಪ್ರಣವ ಸೃಷ್ಟಿಯ ಕಲ್ಪನೆಯು ವೀರಶೈವದ ವೈಶಿಷ್ಟ್ಯ. ನಿಷ್ಕಲವಾದ ಪರಶಿವ ಬ್ರಹ್ಮವು ನಾದ ಬಿಂದು ಕಲಾತ್ಮಕವಾದುದು; ಅದರಲ್ಲಿ ಸೃಷ್ಟಿಯಲೀಲೆ ತೋರಲು, ಅದು ಸಕಲವಾಗಿ, ಅದರಿಂದ ನಾದಬಿಂದು ಕಲಾ ಹೊರ ಹೊಮ್ಮುವುವು. ನಾದವು ಓಂ ಓಂ ಓಂ ಎಂಬ ಶಬ್ದ ರೂಪವಾದುದು. ಸೃಷ್ಟಿಸ್ಥಿತಿಲಯ ಕಾರಣವಾದ ಅಉಮಕಾರಗಳು ಓಂಕಾರದಲ್ಲಿಯೇ 'ಓಂ ಇತ್ಯೇಕಾಕ್ಷರ ಮಿದಂ ಸರ್ವಂ' ಎಂದೂ, 'ಸರ್ವಂಹಿ ಏತದ್ ಬ್ರಹ್ಮ' ಎಂದೂ, ಮಾಂಡೂಕ್ಯೋಪನಿಷತ್ತಿನಲ್ಲಿ ಹೇಳಿರುವುದು ಮೇಲಿನ ವೀರಶೈವರ ನಿಲುವನ್ನು ಸಮರ್ಥಿಸುತ್ತದೆ. ಚೆನ್ನಬಸವೇಶನ ಕರಣಹಸಿಗೆಯಲ್ಲಿ ಹೀಗೆ ಹೇಳಿದೆ.

"ಅಕಾರ ಪ್ರಣವವೇ ಚಿನ್ನದ ಸ್ವರೂಪವಾಗಿರ್ಪುದು....ಯಥಾದೀರ್ಘಘಂಟಾನಿನಾದವತ್ ಓಂ ಓಂ ಓಂ ಎಂಬ ಸುನಾದ ಘೋಷವುಳ್ಳದ್ದೇ ಅಕಾರ ಪ್ರಣವ. ಉಕಾರ ಪ್ರಣವವೇ ಚಿದ್ಬಿಂದು;....ಯಥಾ ಸುವರ್ಣತೈಲ ಧಾರವತ್, ಅಂತಪ್ಪದೊಂದು ಚಿದ್ಬಿಂದು. ಪ್ರಕಾಶವನ್ನುಳ್ಳದ್ದೇ ಉಕಾರ ಪ್ರಣವ. ಮಕಾರ ಪ್ರಣವವೇ ಚಿತ್ಕಲಾ ಸ್ವರೂಪ ವಾಗಿರ್ಪುದು. ಯಥಾ ಅರುಣ ಪ್ರಕಾಶವತ್. ಮಧ್ಯಾಹ್ನ ಕಾಲದ ಚಂಡ ಸೂರ್ಯ ಕೋಟಿಗಳ ಪ್ರಕಾಶವನ್ನು ಕೀಳ್ಪಡಿಸಿ ಬೆಳಗಲ್ಪಟ್ಟ ಮಹಾಪ್ರಕಾಶ ವನ್ನುಳ್ಳದ್ದೇ ಮಕಾರ ಪ್ರಣವ"

'ಜನವಾಗುವಂತಹ ಸಮಸ್ತತೆಯ ಇಂಬಾದ ನಾದ ಉದಯಿಸುವುದಕ್ಕೆ ನಿರಯವದಲ್ಲಿ ಒಂದೂ ಸಾಧನವಿಲ್ಲದೆ ತನ್ನಿಂದ ತಾನೇ ಉಂಟಾದ ಲೀಲೆಯೊಂದುಂಟು....ಅದರಲ್ಲಿ ಕೋರಿದ ಲೀಲೆಯೇ ಅದುರು. ಅದುರಿದ ಮಾತ್ರದಿಂ ಅತಿ ಸೂಕ್ಷ್ಮನಾದ ಘೋಷವುಂಟಾಗುವುದು" ಎಂದು ವೀರಶೈವ ತತ್ವ ಪ್ರಕಾಶಿಕೆಯಲ್ಲಿ ಹೇಳಿರುವ ವಿವರಣೆಯೊಡನೆ ಮೇಲಿನಂತೆ ಕರಣದ ಹಸಿಗೆಯಲ್ಲಿ ಹೇಳಿರುವುದನ್ನು ಮನನ ಮಾಡಿ ಕೊಂಡರೆ ವೀರಶೈವ ಸಿದ್ಧಾಂತದಂತೆ ಸೃಷ್ಟಿಲೀಲಾ ವೈಭವವು ಕಣ್ಣ ಮುಂದೆ ಮಿಂಚಿದಂತಾಗುವುದು. ಪ್ರಶಾಂತ ವಾತಾವರಣ; ಇದಕ್ಕಿದ್ದಂತೆಯೇ ಸೃಷ್ಟಿ ವೈಭವ ಲೀಲೆ; ಅದೇ ನೆನಹು; ಅದೇ ಅದುರು. (vibration) ಅದುರಿದ ಮಾತ್ರದಿಂ ಅತಿ ಸೂಕ್ಷ್ಮನಾದ ಘೋಷಃ "ಯಥಾ ದೀರ್ಘಘಂಟಾನಿನಾದವತ್"; ಹಾಗೆಯೇ ಮಧ್ಯಾಹ್ನ ಕಾಲದ ಚಂಡಸೂರ್ಯಕೋಟಿಗಳ ಪ್ರಕಾಶವನ್ನು ಕೀಳ್ ಬಡಿಸಿ ಬೆಳಗಿಸಲ್ಪಟ್ಟ ಮಹಾ ಪ್ರಕಾಶದ ಉಜ್ವಲ. ಅದುರುವುದು (vibration), ಶಬ್ದ, ಪ್ರಕಾಶ, ಬಿಸಿ ಇವೆಲ್ಲವೂ ಶಕ್ತಿಯ ವಿವಿಧ ರೂಪಗಳೆಂಬುದೂ, ಇವು ಒಂದರಿಂದ ಒಂದಾಗಬಲ್ಲವೆಂಬುದೂ, ಭೌತಿಕ ಶಾಸ್ತ್ರದ ವಿದ್ಯಾರ್ಥಿಗಳಿಗೂ ತಿಳಿದ ವಿಷಯ. ಇಂತಹ ಅದುರುವಿಕೆ, ಶಬ್ದ, ಬೆಳಕು, ಬಿಸಿ ಇವುಗಳಿಂದ ಪ್ರಾರಂಭವಾಗುವುದು ಸೃಷ್ಟಿ. ಹೀಗೆ ಪರಶಿವಶಕ್ತಿಯಿಂದ ಜಗತ್ತು ಉದಯಿಸಿ, ಅದರಲ್ಲಿಯೇ ಇದ್ದು ಅದರಲ್ಲಿಯೇ ಲಯವಾಗುವುದು. "ಶಿವಶಕ್ತ್ಯಾಯುಕ್ತೋ ಯದಿಭವತಿ ಶಕ್ತಃ ಪ್ರಭವಿತುಂ। ನಚೇದೇವಂ ದೇವೋನಖಲು ಕುಶಲಃ ಸ್ಪಂದಿತು ಮಪಿ" ಎಂಬ ಶಂಕರಾಚಾರ್ಯಕೃತ ಸೌಂದರ್ಯಲಹರಿಯಂತೆ ಶಿವನಿಗೆ ಸೃಷ್ಟಿಸಲು ಮೊದಲು ಆಗುವ ಸ್ಪಂದನ ಎಂದರೆ ಉಲುಹು ಸಹ ಶಕ್ತಿವಿಶಿಷ್ಟನಾಗದೆ ಆಗದು.

## ಮುಕ್ತಿ ಕಲ್ಪನೆ :-

"ತನುಬಯಲು ನಿರವಯದೊಳಡಗಿತ್ತು, ಮನಬಯಲು ನಿರವಯದೊಳಡಗಿತ್ತು; ಭಾವಬಯಲು ನಿರವಯದೊಳಡಗಿತ್ತು; ಬಯಲುಬಯಲನೇಬೆರಸಿ, ಬಯಲೇ ಆಯಿತ್ತು; ಕೂಡಲಚೆನ್ನಸಂಗಯ್ಯನೆಂಬನುಡಿ ಅಡಗಿತ್ತು".

ಐಕ್ಯ ಸ್ಥಿತಿಯನ್ನು ಹೇಳುವ ಈ ಚೆನ್ನಬಸವಣ್ಣನ ವಚನ " ಬಯಲು ಬಯಲನ್ನೇ ಬಿತ್ತಿ,ಬಯಲು ಬಯಲನೇ ಬೆಳೆದು ಬಯಲು ಬಯಲಾಯಿತ್ತಯ್ಯ " ಎಂಬ ಪ್ರಭುವಿನ ವಚನದಂತಿದೆ. 'ಬಯಲುಬಯಲನೇ ಬಿತ್ತಿ' ಎಂಬುದರಲ್ಲಿ "ಪೂರ್ಣಮದಃ ಪೂರ್ಣಮಿದಂ" ಎಂಬ ಕಲ್ಪನೆಯಿದೆ. 'ಬಯಲು ಬಯಲನೇ ಬೆಳೆದು' ಎಂಬುದರಲ್ಲಿ "ಪೂರ್ಣಾತ್ ಪೂರ್ಣಮುದಚ್ಯತೇ" ಎಂಬುದನ್ನ, 'ಬಯಲುಬಯಲಾಯಿತ್ತಯ್ಯ' ಎಂಬುದು "ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ" ಎಂಬುದನ್ನು ನೆನಪಿಗೆ ತರುತ್ತದೆ. ಚೆನ್ನಬಸವಣ್ಣನು 'ಬಯಲು ಬಯಲ ಬೆರಸಿ ಬಯಲೇ ಆಯಿತು' ಎಂಬುದರಲ್ಲಿ ಸಹ 'ಪೂರ್ಣಮದಃ' ಎಂದು ಪ್ರಾರಂಭವಾಗುವ ಶಾಂತಿ ಮಂತ್ರದ ಅಭಿಪ್ರಾಯವೇ ಇದೆ. ಪರ ಬ್ರಹ್ಮದಲ್ಲಿ ಹೊರ ಹೊಮ್ಮಿದ ಚಿದಚಿತ್ಪ್ರಪಂಚವೆಲ್ಲವೂ 'ಬ್ರಹ್ಮೈವೇದಂ' ಎಂಬ ಆಧಾರದಂತೆ ಬಯಲು ಪದೋಕ್ತವಾದ ಪರಬ್ರಹ್ಮವೇ ಆಗಿದೆ. ತೋರಿಕೆಯಲ್ಲ. ಪರಬ್ರಹ್ಮವೆಂಬ

ಪ್ರಶಾಂತ ಸಮುದ್ರದಲ್ಲಿ, ಶಕ್ತಿಯೆಂಬ ಮಾರುತವೆದ್ದು, ಬ್ರಹ್ಮಾಂಡಗಳೆಂಬ ತೆರೆನೊರೆಗಳೆದ್ದು, ಮತ್ತೆ ಅದರಲ್ಲಿಯೇ ಲಯವಾಗಿ, ಪ್ರಶಾಂತವಾದ ಪರಬ್ರಹ್ಮವೇ ಉಳಿಯುವು ದೆಂಬುದು ಚೆನ್ನಬಸವೇಶಾದಿಗಳ ಸಾಹಿತ್ಯದಿಂದ ಕಂಡು ಬರುವ ಸಿದ್ಧಾಂತ.

ಸೃಷ್ಟಿಪೂರ್ವಸ್ಥಿತಿ :-

ಮೇಲೆ ಹೇಳಿದುದರಲ್ಲಿ ಸೃಷ್ಟಿಯ ಉಲುಹಿನಿಂದ (vibration) ಪ್ರಾರಂಭವಾಯಿತೆನ್ನಲಾಯಿತು. ಅದನ್ನು ಈ ಕೆಳಗಿನ ವಚನವು ಸಮರ್ಥಿಸುತ್ತದೆ.

ಆದಿಅನಾದಿಇಲ್ಲದಂದು ,ಶೂನ್ಯಮಹಾಶೂನ್ಯವಿಲ್ಲದಂದು, ಸ್ಥೂಲಸೂಕ್ಷ್ಮವಿಲ್ಲದಂದು, ಸಾಕಾರನಿರಾಕಾರವಿಲ್ಲದಂದು ವಾಕ್ಕುಹುಟ್ಟದಂದು ದ್ವೈತಾದ್ವೈತವಿಲ್ಲದಂದು ........... ನಾನುನೀವೆಯಿಲ್ಲದಂದು, ನೀನು ಉಲುಹುಅಡಗಿಇದ್ದೆ ಯಲ್ಲಾ ಕಲಿದೇವಯ್ಯಾ,,

ಸೃಷ್ಟಿಪೂರ್ವಸ್ಥಿತಿ ಉಲುಹು (vibration) ಅಡಗಿದ್ದ ಸ್ಥಿತಿ ಅದರಲ್ಲಿ ಲೀಲೆ ತೋರಲು ಉಲುಹು (ಸ್ಪಂದನ) ಆಗಿ ಜಗದುದಯಕ್ಕೆ ಪ್ರಾರಂಭ. '' ಸದೇವಸೋಮ್ಯೇದಮಗ್ರ ಆಸೀತ್'' ಎಂದು ಛಾಂದೋಗ್ಯದಲ್ಲಿಯೂ, 'ಏಕಂಸತ್'' ಎಂದು ಋಗ್ವೇದದಲ್ಲಿಯೂ, ಹೇಳಿರುವುದರಲ್ಲಿ ಸೃಷ್ಟಿಪೂರ್ವದಲ್ಲಿ 'ಸತ್, ಇದ್ದಿತೆಂದು ಹೇಳಿದೆ. 'ಸತ್, ಎಂದರೆ ಇರುವಿಕೆ ಎಂದು ಅರ್ಥವಿರುವುದರಿಂದ ಸೃಷ್ಟಿಯಾದ ಅನಂತರ ಇರುವುದೆಂಬ ಕಲ್ಪನೆ ಬರುವುದೇ ಹೊರತು ಮೊದಲಲ್ಲ. ''ಅಸದ್ವಾಇದಮಗ್ರಆಸೀತ್ ತತೋವೈಸದಜಾಯತ" ಎಂದು ತೈತ್ತರೀಯ ಉಪನಿಷತ್ತಿನಲ್ಲಿಯೂ, "ಅಸತ:ಸದಜಾಯತ" ಎಂದು ಋಗ್ವೇದ (೧೦೦-೭೭-೨)ದಲ್ಲಿಯೂ, ಹೇಳಿರುವುದರಲ್ಲಿ ಅಸತ್ ಮೊದಲಿದ್ದು ಅದರಿಂದ ಸತ್ ಹುಟ್ಟಿತು ಎಂದು ಹೇಳಿದೆ. "ಕಥಮಸತ: ಸಜ್ಜಾಯತೇತಿ" ಎಂದರೆ ಅಸತ್ ಎಂದರೆ ಇಲ್ಲದಿರುವುದರಲ್ಲಿ ಸತ್ ಎಂದರೆ ಇರುವುದು ಹುಟ್ಟುತ್ತದೆ, ಎಂಬ ಪ್ರಶ್ನೆ ಹುಟ್ಟಿತು. ನಾಸದೀಯಸೂಕ್ತವು ಸತ್, ಅಸತ್, ಮೃತ್ಯುಅಮೃತ, ದಿವಾ ರಾತ್ರಿ ಮೊದಲಾದ ದ್ವಂದ್ವ ಪದಗಳನ್ನು ಬಿಟ್ಟು, ಇವು ಏನೇನೂ ಇಲ್ಲದಿರುವಾಗ ಅದ್ವೈತವಾದುದೆಂದು ಚೈತನ್ಯದಿಂದ ಸ್ಫುರಿಸುತ್ತದೆಂದು ಹೇಳಿದೆ.

"ನಾಸದಾಸೀನ್ನೋಸದಾಸೀತ್....ನಮೃತ್ಯುರಾಸೀತ್ಅಮೃತ ನತರ್ಹಿರಾತ್ರ್ಯಾ ಅಹ್ನಆಸೀತ್ಪ್ರಕೇತ: ಅನೀದವಾತಂ ಸ್ವಧಯಾತದೇಕಂ ತಸ್ಮಾದ್ಧಾನ್ಯನ್ನಪರ: ಕಿಂಚನಾಸ".

ಇದರ ಕನ್ನಡದ ಪದ್ಯಾನುವಾದ ಹೀಗಿದೆ:—

ಇರದಂದು ಸತ್ತೆನಿಪಸತ್ತೆನಿಪುದಾವುದುಂ। ಇರದಂದುಲೋಕಂಗಳ್ ಮೇಲಿನಾವ್ಯೋಮಮುಂ॥ ಇರದಂದು ಮರಣಮುಂ ಮತ್ತೆಯಮರತ್ವಮುಂ। ಇರದಂದು ಪಗಲೆಂಬ ನಿಸಿಯೆಂಬುದಾವುದುಂ॥ ಇರದಂದಿವಂತೋರ್ಪಿನ ಶಶಿಪ್ರಕಾಶಮುಂ। ಇರದಂದಿವನುಳಿದುದೇನುಮುಂ ವಾಯುವುಂ॥ ಇರದೊಡಂ ಸ್ವಸ್ವರೂಪೈಕ ಚಿಚ್ಛಕ್ತಿಯಿಂ । ಸ್ಫುರಿಸುತಿರ್ದುದದ್ವೈತಪರಮಾತ್ಮತತ್ವಂ॥

"ಯದಾತಮಃ ನದಿವಾನರಾತ್ರಿರ್ನಸನ್ನಚಾ ಸಚ್ಛಿವ ಏವಕೇವಲಃ। ತದಕ್ಷರಂ ತತ್ ಸವಿತುರ್ವರೇಣ್ಯಂ ಪ್ರಜ್ಞಾಚ ತಸ್ಮಾತ್ ಪ್ರಸೃತಾಪುರಾಣೀ"ಎಂಬ ಶ್ವೇತಾಶ್ವತರ ಮಂತ್ರದಲ್ಲಿ ನಾಸದೀಯಸೂಕ್ತದ ಮುಖ್ಯಾಂಶಗಳಿವೆ. ರವಿ ಶಶಿ ದಿನ ನಿಶಿ ಸದಸತ್‌ಗಳಿಲ್ಲದಾಗ ಇದ್ದ ಕೇವಲ ಶಿವನಿಂದ ಸನಾತನ ಶಕ್ತಿಯು ಹೊರಹೊಮ್ಮಿ ಜಗತ್ಕಾರಣವಾಗುವುದನ್ನು ಈ ಮಂತ್ರವು ನಾಸದೀಯ ಸೂಕ್ತದಲ್ಲಿನ ಪದಗಳಿಂದಲೇ ಹೇಳುತ್ತದೆ. ಚೆನ್ನಬಸವೇಶನು ಚರಾಚರ ಪ್ರಾಣಿಗಳಿಂದ ತೋರುವ ತೋರಿಕೆ ಏನೇನೂ ಇಲ್ಲದಂದು ಸರ್ವಶೂನ್ಯನಿರಾಲಂಬಬ್ರಹ್ಮವು ತಾನೊಂದೇ ಒಪ್ಪುತಿರ್ದಿತ.. ಎಂದು ಕರಣದಹಸಿಗೆಯಲ್ಲಿ ಹೇಳಿದ್ದಾನೆ. ಏನೇನೂ ಇಲ್ಲದಿದ್ದಾಗ ಹೆಸರೇನೂ ಇಲ್ಲದ ಸ್ಥಿತಿಯನ್ನು ಚೆನ್ನಬಸವೇಶ ವಚನವು ಹೀಗೆ ಹೇಳುತ್ತದೆ.

''ಶೂನ್ಯಹೃದಯ ನಿಶ್ಶೂನ್ಯವಿಲ್ಲದಂದು, ಬ್ರಹ್ಮ ವಿಷ್ಣು ಮಹೇಶ್ವರರಿಲ್ಲದಂದು, ಹದಿನಾಲ್ಕುಭುವನದಿಗ್ವಳಯಗಳಿಲ್ಲದಂದು, ಕೂಡಲಚೆನ್ನಯ್ಯನೆಂಬ ಹೆಸರು ಮುನ್ನಿಲ್ಲದಂದು''.

ಪ್ರಭುದೇವರ ವಚನವೊಂದು ಸದಸತುಗಳಿಲ್ಲದುದನ್ನು ಇದ್ದೆಯಲ್ಲ ಇಲ್ಲದಂತೆ ಎಂದು ತನ್ನದೇ ಆದ ಅದ್ವಿತೀಯ ರೀತಿಯಲ್ಲಿ ಹೇಳುತ್ತದೆ.

"ಆದಿಯಾಧಾರವಿಲ್ಲದಂದು, ಹಮ್ಮುಬಿಮ್ಮುಗಳಿಲ್ಲದಂದು, ಸುರಾಳನಿರಾಳಗಳಿಲ್ಲದಂದು, ಶೂನ್ಯನಿಶ್ಶೂನ್ಯವಿಲ್ಲದಂದು, ಚರಾಚರವೆಲ್ಲ ರಚನೆಗೆಬಾರದಂದು ಗುಹೇಶ್ವರಾ, ನೀನೊಬ್ಬನೇ ಇದ್ದೆಯಲ್ಲ ಇಲ್ಲದಂತೆ".

'ತದೇಕಂ' ನಾಸದೀಯ ಸೂಕ್ತದಲ್ಲಿ ಹೇಳಿದೆಯಲ್ಲದೆ 'ತಸ್ಮಾತ್ ಅನ್ಯತ್ ನಪರಃ' ಎಂದಿರುವುದನ್ನು 'ನೀನೊಬ್ಬನೇ' ಎಂಬುದು ಸೂಚಿಸುತ್ತದೆ. ಸತ್ ಎಂದರೆ ಇರುವಿಕೆ ಅಸತ್ ಎಂದರೆ ಇಲ್ಲದಿರುವಿಕೆ. ಇಂತಹ ಸ್ಥಿತಿಯನ್ನು ಇದ್ದೆಯಲ್ಲ ಇಲ್ಲದಂತೆ ಎಂದು ಹೇಳುವುದಕ್ಕಿಂತ ಚೆನ್ನಾಗಿ ಹೇಳುವುದಕ್ಕೆ ಸಾಧ್ಯವಿಲ್ಲ. ಈ ಸ್ಥಿತಿಯನ್ನು 'ಗಗನಕುಸುಮ ಪರಿಮಳದಿಂದತ್ತಲು' ಎಂದು ಈ ವಚನದಲ್ಲಿ ಸುಂದರವಾಗಿ ಹೇಳಿದೆ:

"ಧರೆಯಾಕಾಶವಿಲ್ಲದಂದು, ತ್ರೈಮಂಡಲನೆಲೆಗೊಳ್ಳದಂದು, ಹೋಮನೇಮಜಪತಪವಿಲ್ಲದಂದು, ನಿಮ್ಮನಾರು ಬಲ್ಲರು? ಹರಿಬ್ರಹ್ಮರಿಗೆ ಅಗೋಚರ; ನಿರ್ಲೇಪನಿರಂಜನನಾಗಿ, ವೇದಗಳು ನಿಮ್ಮನರಿಯವು, ಶಾಸ್ತ್ರ ಶ್ರುತಿ ಸ್ಮೃತಿಗಳು ನಿಮ್ಮನರಿಯವು, ಗಗನಕುಸುಮಪರಿಮಳದಿಂದತ್ತಲು ಗುಹೇಶ್ವರಾ, ನಿಮ್ಮನಾರು ಬಲ್ಲರು?

ಗಗನಕುಸುಮವನ್ನಾರೂ ಅರಿಯರು; ಇನ್ನು ಅದರ ಪರಿಮಳವೆನ್ನುವುದು ಊಹಾತೀತ; ಇನ್ನು ಅದರಾಚೆಗಂತೆ ಇದ್ದೆಯಲ್ಲ ಇಲ್ಲದಂತೆ! "ನಾಸದಾಸೀತ್ ನೋಸದಾಸೀತ್, ನಸತ್ ನಚಾಸತ್ ಶಿವಏವ ಕೇವಲ:" ಎಂದು ವರ್ಣಿತವಾಗಿರುವಸ್ಥಿತಿ. ಇದು ವೀರಶೈವದ "ಶಿವಾದ್ವೈತ ಸ್ಥಿತಿ". ಮುಂದೆ ನಾಸದೀಯಸೂಕ್ತದಲ್ಲಿ "ಕಾಮಸ್ತದಗ್ರೇ" ಎಂಬ ಪದದಿಂದ ಇಚ್ಛಾಶಕ್ತಿಯ ಆವಿರ್ಭಾವವೂ, 'ತಪಸಸ್ತನ್ಮಹಿನಾಜಾಯತ' ಎಂಬ ಪದಗಳಲ್ಲಿ ಜ್ಞಾನಶಕ್ತಿಯ ಆವಿರ್ಭಾವವೂ ಆಗಿ, ಜಗತ್ತಾಗುವುದು ಉಕ್ತವಾಗಿದೆ. "ತುಚ್ಛೇನ ಆಭು ಅಪಿಹಿತಂ" ಎಂದು ನಾಸದೀಯ ಸೂಕ್ತವುಹೇಳುವುದರಲ್ಲಿ ಕೇವಲವಾಗಿದ್ದ "ಶಿವಾದ್ವೈತಸ್ಥಿತಿ"ಯು ಶಕ್ತಿವಿಶಿಷ್ಟವಾಗಿ ಜಗತ್ತಾಗಿರುವುದನ್ನು ಹೇಳುತ್ತದೆ. "ತುಚ್ಛೇನ" ಎಂದರೆ ಮಾಯಾಶಕ್ತಿ; "ಆಭು" ಎಂದರೆ void ಎಂದು, ಮ್ಯಾಕ್ಸ್‌ಮೂಲರೂ, ಪೊಳ್ಳು ಎಂದು ತಿಲಕರೂ, ಅರ್ಥ ಮಾಡಿ ಇದು ಬ್ರಹ್ಮವನ್ನು ಸೂಚಿಸುತ್ತದೆ ಎಂದಿದ್ದಾರೆ. "ಪರಮೇವ್ಯೋಮನ್" ಎಂದು ಇದನ್ನೇ ಹೇಳಿದೆ. ಈ ಪದಗಳು "ಬಯಲು ಶೂನ್ಯ" ಎಂಬ ವಚನ ವಾಙ್ಮಯದ ಪದಗಳಂತಿವೆ. ಆದ್ದರಿಂದಡಾ|| ಎಂ. ವಿ. ಕೃಷ್ಣರಾಯರು ವಚನವಾಙ್ಮಯವನ್ನು ನಾಸದೀಯ ಸೂಕ್ತದ "Counter Part" ಪ್ರತಿರೂಪ ಎಂದಿರುವುದು ಸರಿಯಾಗಿದೆ. ಡಾ|| ವಿ ಕೃ.ಗೋಕಾಕರು ನನ್ನ ನಾಸದೀಯ ಸೂಕ್ತ ಗ್ರಂಥದ ಮುನ್ನುಡಿಯಲ್ಲಿ "ವಚನಸಾಹಿತ್ಯದಲ್ಲಿ ಆ ಪ್ರಜ್ಞೆ ಅವತರಿಸಿರುವ ರೀತಿಯನ್ನು ಮನದಟ್ಟಾಗುವಂತೆ ತೋರಿಸಿ, ಮಹದುಪಕಾರವನ್ನು ಮಾಡಿದ್ದಾರೆ" ಎಂದಿದ್ದಾರೆ. ಒಟ್ಟಿನಲ್ಲಿ ಹೇಳುವುದಾದರೆ, ವೇದಾಗಮೋಪನಿಷತ್ತುಗಳು ವಚನವಾಙ್ಮಯಕ್ಕೆ ಹಿನ್ನೆಲೆಯಾಗಿವೆ. ಆದರೆ ವಚನವಾಙ್ಮಯವು ಅದಕ್ಕೂ ಮುಂದೆ ಹೋಗಿದೆ.

"ಅನಿಮಿಷಂಗೆ ಲಿಂಗವ ಕೊಟ್ಟಾತ ಬಸವಣ್ಣ; ಆ ಲಿಂಗವು ನಿನಗೆ ಸೇರಿತ್ತಾಗಿ ಬಸವಣ್ಣನ ಸಂಪ್ರದಾಯದ ಕಂದನು ನೀನು". ಎಂದು ಚೆನ್ನಬಸವೇಶನುಪ್ರಭುವಿಗೆ ಹೇಳುವುದರಿಂದ, ಮಾಯಿದೇವರ ಮಾತಿನಲ್ಲಿ ಬಸವಣ್ಣನು 'ವೀರಶೈವನಿರ್ಣಯಪರಮಾವತಾರ' ನು. ಆದರೆ ಬಸವಣ್ಣನೇ ಹೇಳುವಂತೆ ಚೆನ್ನಬಸವೇಶನು 'ಅಷ್ಟಾವರಣ ಷಟ್‌ಸ್ಥಲಾದಿ ವೀರಶೈವ ಸಿದ್ಧಾಂತರಚನೆಗಾಗಿ ಅವತರಿಸಿದ ಪುಣ್ಯಪುರುಷ' 'ಆಚಾರದಲ್ಲಿ ಅನುಭಾವಿ, ಪ್ರಸಾದದಲ್ಲಿ ಪರಿಣಾಮಿ, ಗುಹೇಶ್ವರಲಿಂಗದಲ್ಲಿ ಚೆನ್ನಬಸವಣ್ಣನೆಂಬ ಪ್ರಸಾದಿಗೆ ನಮೋನಮೋ' ಎಂದು ಪ್ರಭುದೇವವಚನದಿಂದ ಸಮಾಪ್ತಿಗೊಳಿಸಬಹುದು.

—

## : ನುಡಿ ಮುತ್ತುಗಳು :

ಆತ್ಮಗೌರವ, ಆತ್ಮಜ್ಞಾನ ಮತ್ತು ಆತ್ಮ ಸಂಯಮ –ಇವು ಮೂರೇ ಜೀವನವನ್ನು ಸಾರ್ವಭೌಮ ಪದವಿಗೇರಿಸಬಲ್ಲವು

—ಟೆನ್ನಿಸನ್.

ದಿನದಿನವೂ ಗುಡಿಸಿದರೆ ಮನೆ ಚೊಕ್ಕಟವಾಗುವಂತೆ ದಿನವೂ ಅಧ್ಯಯನ ಮಾಡುವುದರಿಂದ ಮನಸ್ಸು ಪರಿಶುದ್ಧವಾಗುತ್ತದೆ.

—ಬುದ್ಧ.

# ಕಣ್ಣಗಿಯ ಕಾಲಂದುಗೆ

—ಹೆಚ್. ದೇವೀರಪ್ಪ

ತಮಿಳಿನ 'ಶಿಲಪ್ಪದಿಗಾರಂ' ಒಂದು ಪ್ರಾಚೀನ ಆಚಾರ್ಯ ಗ್ರಂಥ. ಆ ಗ್ರಂಥದಿಂದ 'ಕಣ್ಣಗಿಯ ಕಾಲಂದುಗೆ' ಎಂಬ ಈ ಕಥೆಯನ್ನಾರಿಸಿ ಮಕ್ಕಳಿಗಾಗಿ ಎಚ್. ದೇವೀರಪ್ಪನವರು ಬರೆದಿದ್ದಾರೆ. ಈ ಕಥೆ ಅವರ ಸರಳ ಬರವಣಿಗೆಗೆ ಉತ್ತಮ ನಿದರ್ಶನ. ಕನ್ನಡ ಸಾಹಿತ್ಯದಲ್ಲಿ ಅಪಾರ ಸೇವೆಯನ್ನು ಸಲ್ಲಿಸಿರುವ ದೇವೀರಪ್ಪನವರು ದೊಡ್ಡ ಸಾಹಿತಿಗಳು. ಹರಿಹರನ ಕಾವ್ಯಗಳು ಇವರ ವಿಶೇಷ ಅಧ್ಯಯನಗಳ ವಿನುರ್ಶೆ. ನಾಟಕ, ಕಾವ್ಯಗಳ ಸಂಪಾದನೆ, ಕಥೆಕಾದಂಬರೀ ಇತಿಹಾಸ—ಈ ಎಲ್ಲ ಬಗೆಯ ಸಾಹಿತ್ಯಪ್ರಕಾರಗಳಲ್ಲಿ ಸೇವೆ ಸಲ್ಲಿಸುತ್ತಾ ಶ್ರೀಯುತರು ಪ್ರಸಿದ್ಧಿಯಾಗಿದ್ದಾರೆ.

ಸಾವಿರಾರು ವರ್ಷಗಳ ಹಿಂದೆ ಕಾವೇರೀ ನದಿ ದಂಡೆಯ ಮೇಲೆ ಪುಹಾರ್ ಎಂಬ ರೇವುಪಟ್ಟಣ ವಿದ್ದಿತು. ಅದು ಬಹು ಸಂಪದ್ಭರಿತವಾಗಿದ್ದಿತು. ಆ ಪಟ್ಟಣದಲ್ಲಿ ಮಾಚತ್ತುವನ್ ಎಂಬ ಶ್ರೀಮಂತ ವರ್ತಕನಿದ್ದನು. ಕೋವಲ ಎಂಬುವನು ಆತನ ಏಕೈಕ ಪುತ್ರ. ಅದೇ ಪಟ್ಟಣದ ಮಾನಾಯ್ಕನ್ ಎಂಬುವನ ಮಗಳಾದ ಕಣ್ಣಗಿಯು ಕೋವಲನ ಮಡದಿ.

ಕೋವಲನಿಗೆ ಸಂಗೀತ, ನೃತ್ಯ ಮುಂತಾದ ಕಲೆಗಳಲ್ಲಿ ಬಹಳ ಆಸಕ್ತಿ ಇದ್ದಿತು. ಅದೇ ಪಟ್ಟಣದಲ್ಲಿ ಮಾಧವಿ ಎಂಬ ನರ್ತಕಿ ಇದ್ದಳು. ಆಕೆಯ ನಾಟ್ಯ ವಿದ್ಯೆಯನ್ನು ಕೋವಲನು ಬಹುವಾಗಿ ಮೆಚ್ಚಿ ಕೊಂಡಿದ್ದನು. ಅವರಿಬ್ಬರಲ್ಲಿ ಸ್ನೇಹ ಅಂಕುರಿಸಿತು. ಕೋವಲನು ಮನೆಗೆ ಬರದೆ ಮಾಧವಿಯ ಜೊತೆಗೆ ಇರ ಹತ್ತಿದನು. ಹಣ ಬೇಕಾದಾಗ ಮಾತ್ರ ಮನೆಗೆ ಬಂದು ತೆಗೆದುಕೊಂಡು ಹೋಗುತ್ತಿದ್ದನು. ವ್ಯಾಪಾರ ವ್ಯವಹಾರಗಳ ಕಡೆಗೆ ಕೊಂಚವು ಲಕ್ಷ್ಯ ಕೊಡಲಿಲ್ಲ. ತಾಯಿತಂದೆಗಳ ಬುದ್ಧಿವಾದವನ್ನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಹೆಂಡತಿಯ ಕಡೆಗೆ ಕಣ್ಣೆತ್ತಿಯೂ ನೋಡಲಿಲ್ಲ. ಬರುಬರುತ, ಮನೆಗೆ ಬರುವುದನ್ನೇ ನಿಲ್ಲಿಸಿ ಬಿಟ್ಟನು.

ಕಣ್ಣಗಿಯು ಪತಿಯೇ ಪರದೈವವೆಂದು ನಂಬಿದ್ದಳು. ಹಲವು ವ್ರತ ನೋಂಪಿಗಳನ್ನು ಕೈಗೊಂಡಳು. ಹಗಲಿರಳೂ ಪತಿಯ ಧ್ಯಾನದಲ್ಲಿಯೇ ಮಗ್ನಳಾದಳು. ಆದರೆ ಪ್ರಯೋಜನವಾಗಲಿಲ್ಲ.

'ಕುಳಿತು ಉಣ್ಣುವವನಿಗೆ ಕುಡಿಕೆ ಹೊನ್ನು ಸಾಲದು' ಎಂದಂತೆ, ಕೋವಲನು ಮನೆಯಿಂದ ತೆಗೆದುಕೊಂಡು ಹೋಗಿದ್ದ ಹೊನ್ನುಗಳು, ಒಡವೆಗಳು ಎಲ್ಲವೂ ಕರಗಿ ಹೋದವು. ಆತನು ಬಡವನಾದನು. ಆವನನ್ನು ಯಾರೂ ಮಾತನಾಡಿಸಲಿಲ್ಲ. ಮಾಧವಿಯು 'ಪಡಿಹೊನ್ನು'ಗಳನ್ನು ಏಕೆ ತರಲಿಲ್ಲ. ಎಂದು ಕೋವಲನೊಂದಿಗೆ ಜಗಳವಾಡಿ ಅವನನ್ನು ಮನೆಯಿಂದ ಹೊರಗಟ್ಟಿದಳು.

ಆಗ ಕೋವಲನಲ್ಲಿ ಅರಿವು ಮೂಡಿತು. ಸಾಕಿ ಸಲಹಿದ ತಂದೆತಾಯಿಗಳನ್ನು ಮರೆತನಲ್ಲಾ, ಧರ್ಮಪತ್ನಿಯನ್ನು ಕೈಬಿಟ್ಟೆನಲ್ಲಾ ಎಂದು ಬೇಗುದಿಗೊಂಡನು. ಬೇರೆ ಎಲ್ಲಿಗೆ ಹೋಗಲೂ ಮಾರ್ಗವಿಲ್ಲದೆ ಮನೆಗೆ ಮರಳಿದನು.

ಕಣ್ಣಗಿಯು ಎಂದಿನಂತೆ ಆ ದಿನವೂ ಪತಿಯು ಬರುವುದನ್ನೇ ಹಾರೈಸುತ್ತ, ಬಾಗಿಲಲ್ಲಿ ನಿಂತಿದ್ದಳು. ಆನಂದದಿಂದ ಅವನನ್ನು ಎದುರುಗೊಂಡಳು. ಕೋವಲನು

ಮನೆಯೊಳಕ್ಕೆ ಹೋಗಿ ನೋಡುತ್ತಾನೆ. ಮನೆ ಬರಿದೋ ಬರಿದು! ಮನೆಯೊಳಗೆ ಹಿಡಿಕಾಳೂ ಇಲ್ಲ. ಪಾತ್ರೆಪರಡಿಗಳಿಲ್ಲ. ಅವೆಲ್ಲವನ್ನು ಮಾರಿ ಬಂದ ಹಣದಿಂದ ಕಣ್ಣಗಿ ತನ್ನ ಜೀವನವನ್ನು ನಡೆಸಿದ್ದಳು. ಮಗನು ಕೆಟ್ಟು ಹೋದನಲ್ಲ ಎಂಬ ವ್ಯಥೆಯಿಂದ ಅವನ ತಾಯಿತಂದೆಗಳು ಮರಣ ಹೊಂದಿದ್ದರು.

ಕೋವಲನಿಗೆ ಆ ಮನೆಯಲ್ಲಿ ನಿಲ್ಲಲು ಇಷ್ಟವಾಗಲಿಲ್ಲ. ಮಧುರಾ ನಗರಕ್ಕೆ ಹೋಗಿ ಅಲ್ಲಿ ಏನಾದರೊಂದು ಕೆಲಸವನ್ನು ಮಾಡಿ ಬಾಳುವೆ ಮಾಡೋಣ ಎಂದು, ಹೆಂಡತಿಯನ್ನು ಒಡಗೊಂಡು ಮಧುರೆಯತ್ತ ಹೊರಟನು.

ಮಧುರೆಗೆ ಹೋಗುವ ಮಾರ್ಗ ಇವರಿಗೆ ತಿಳಿಯದು. ಕವುಂತಿ ಎಂಬ ಜೈನ ಸನ್ಯಾಸಿನಿಯು ಇವರಿಗೆ ಮಾರ್ಗದರ್ಶಕಳಾದಳು. ಇವರು ಅನೇಕ ದಿನಗಳಕಾಲ ಪ್ರಯಾಣ ಮಾಡಿ ಮಧುರೆಯನ್ನು ಮುಟ್ಟಿದರು. ಮಾತಲಿ ಎಂಬ ಬಡವಿಯ ಮನೆಯಲ್ಲಿ ಇವರಿಬ್ಬರೂ ವಸತಿ ಮಾಡಿದರು.

ಕೋವಲನು ವ್ಯಾಪಾರವೊಂದನ್ನು ಬಿಟ್ಟು ಬೇರೆ ಯಾವವೃತ್ತಿಯನ್ನೂ ತಿಳಿಯದವನಾಗಿದ್ದನು. ವ್ಯಾಪಾರ ಮಾಡುವುದಕ್ಕೆ ಭಂಡವಾಳನ್ನು ಹೇಗೆ ಜೋಡಿಸುವುದು ? ಎಂದು ಚಿಂತಿಸಿದನು. ಕಣ್ಣಗಿ ಈತನ ಇಂಗಿತವನ್ನು ಅರಿತಳು. "ವ್ಯಾಪಾರ ಮಾಡಲು ಮೂಲಧನವಿಲ್ಲ ಎಂಬ ಚಿಂತೆಯನ್ನು ಬಿಡಿ, ನನ್ನ ಕಾಲಂದುಗೆಗಳಿವೆ. ಒಂದೊಂದು ಸಾವಿರ ಬೆಲೆಯುಳ್ಳದ್ದಾಗಿದೆ. ಇದೋ, ತೆಗೆದುಕೊಳ್ಳಿ" ಎಂದು ಹೇಳಿ ನನ್ನ ಅಂದುಗೆಗಳಲ್ಲಿ ಒಂದನ್ನು ತೆಗೆದು ಪತಿಯ ಕಯ್ಯಲ್ಲಿಟ್ಟಳು. ಕೋವಲನು ನರ್ತಕಿಯಾದ ಮಾಧವಿಗೆ ಅಂತಹ ಅಂದುಗೆಗಳನ್ನು ಮಾಡಿಸಿಕೊಟ್ಟಿದ್ದ. ಆದರೆ ಈಗ ಆಕೆ ಇವನನ್ನು ಕಣ್ಣೆತ್ತಿಯು ನೋಡುತ್ತಿರಲಿಲ್ಲ. ಕಣ್ಣಗಿಯ ಕ್ಷಮಾಗುಣವನ್ನೂ ತ್ಯಾಗ ಬುದ್ಧಿಯನ್ನೂ ಕಂಡು ಕೋವಲನಿಗೆ ದುಃಖ ಒತ್ತರಿಸಿ ಬ ತು. ಅವನು ಕಣ್ಣೀರ್ಗರೆಯುತ್ತ ‹‹ಕಣ್ಣಗಿ, ನೀನು ನನ್ನ ಮಡದಿಮಾತ್ರವಲ್ಲ, ನನ್ನ ಪಾಲಿನದೇವತೆ" ಎಂದು ಅತ್ತನು.

ಕಣ್ಣಗಿಯು ‹‹ಆದದ್ದು ಆಗಿ ಹೋಯಿತು ಈಗಲೇ ಹೊರಡಿ. ಅಂದುಗೆಯನ್ನು ಮಾರಿ ಹಣ ತೆಗೆದುಕೊಂಡು ಬನ್ನಿ" ಎಂದಳು. ಈತನು ಅರಮನೆಯ ಅಕ್ಕಸಾಲಿಗನಲ್ಲಿಗೆ ಹೋಗಿ ಅಂದುಗೆಯನ್ನು ತೋರಿಸಿ ಅದರ ಬೆಲೆಯನ್ನು ಕೇಳಿದನು. ರತ್ನಖಚಿತವಾದ ಆ ಕಾಲಂದುಗೆಯನ್ನು ಪರೀಕ್ಷಿಸಿ ‹‹ಇದು ಸಾಮಾನ್ಯವಾದ ಒಡವೆಯಲ್ಲ; ಬಹು ಅಮೂಲ್ಯವಾದುದು, ಅರಸರು ಮಾತ್ರ ಇದರ ಬೆಲೆಯನ್ನು ಕೊಡಬಲ್ಲರು. ನಾನು ಇದನ್ನು ಅರಮನೆಗೆ ತೆಗೆದುಕೊಂಡು ಹೋಗಿ ರಾಜನಿಗೂ ರಾಣಿಗೂ ತೋರಿಸುತ್ತೇನೆ. ಅವರು ಇದನ್ನು ಕೊಳ್ಳದೆ ಇರಲಾರರು ನಾನು ಅಲ್ಲಿಗೆ ಹೋಗಿ ಬರುತ್ತೇನೆ ಅಲ್ಲಿಯತನಕ ನೀನು ಇಲ್ಲಿಯೇ ಇರು" ಎಂದು ಹೇಳಿದವನೇ ಅರಮನೆಗೆ ತೆರಳಿದನು.

ಮೋಸವನ್ನು ಕಂಡರಿಯದ ಕೋವಲನು ಅವನನ್ನು ನಂಬಿ ಅಲ್ಲಿಯೇ ನಿಂತನು. ಆದರೆ ಅಕ್ಕಸಾಲಿಗನು ನಂಬಿಗೆಗೆ ತಕ್ಕವನಾಗಿರಲಿಲ್ಲ. ರಾಣಿಯು ಅವನಿಗೆ ಒಂದು ಅಂದುಗೆಯನ್ನು ಕೊಟ್ಟು ಸರಿಪಡಿಸೆಂದು ಹೇಳಿದ್ದಳು. ಅಕ್ಕಸಾಲಿಗ ಆ ಬೆಲೆಬಾಳುವ ಅಂದುಗೆಯನ್ನು ತನ್ನಲ್ಲಿಯೇ ಮುಚ್ಚಿಟ್ಟುಕೊಂಡು ಅದನ್ನು ಕಳ್ಳರು ಅಪಹರಿಸಿಬಿಟ್ಟರು ಎಂದು ಕಥೆ ಕಟ್ಟಿದ್ದ. ಅರಸನು ಅವನನ್ನು ನಂಬಿರಲಿಲ್ಲ. ‹‹ಕಾಲಂದುಗೆಯನ್ನು ತಂದು ಒಪ್ಪಿಸದಿದ್ದರೆ ನಿನ್ನನ್ನು ಶೂಲಕ್ಕೇರಿಸುತ್ತೇನೆ" ಎಂದು ಬೆದರಿಸಿದ್ದನು. ಕಣ್ಣಗಿಯ ಅಂದುಗೆಯೂ ಅರಮನೆಯವರು ಕೊಟ್ಟಿದ್ದ ಅಂದುಗೆಯೂ ಒಂದನ್ನೊಂದು ಸಂಪೂರ್ಣವಾಗಿ ಹೋಲುತ್ತಿದ್ದವು.

ಅಕ್ಕಸಾಲಿಗನು ಅರಸನನ್ನು ಕಂಡು ಅತಿ ವಿನಯದಿಂದ ವಂದಿಸಿ ‘‘ಪ್ರಭುಗಳೇ, ಕಳೆದು ಹೋದ ಕಾಲಂದುಗೆ ಸಿಕ್ಕಿತು. ಅದನ್ನು ಕದ್ದೊಯ್ದವನಾರೋ ತಿಳಿಯದು. ಈ ಅಂದುಗೆಯನ್ನು ಕದ್ದವನೇ ಅದನ್ನು ಮಾರಲು ನನ್ನ ಅಂಗಡಿಗೆ ತಂದಿದ್ದಾನೆ. ಅವನನ್ನು ಅಂಗಡಿಯಲ್ಲಿ ಕುಳ್ಳಿರಿಸಿ ಬಂದಿದ್ದೇನೆ" ಎಂದು ಬಿನ್ನವಿಸಿಕೊಂಡನು.

ಅರಸನು ಆ ಅಂದುಗೆಯನ್ನು ಪರೀಕ್ಷಿಸಿದನು. ಅಕ್ಕಸಾಲಿಗನು ಹೇಳಿದ್ದು ದಿಟವೆಂದೇ ಬಗೆದನು. ಕೋವಲನನ್ನು ತನ್ನಲ್ಲಿಗೆ ಕರೆಸಿ ವಿಚಾರಣೆ ನಡೆಸುವ

ಗೋಜಿಗೆ ಹೋಗಲಿಲ್ಲ. ಭಟರನ್ನು ಕರೆಸಿ.. "ಅಂದುಗೆಯನ್ನು ಕದ್ದ ಕಳ್ಳನನ್ನು ಶೂಲಕ್ಕೆ ಹಾಕಿಬಿಡಿ" ಎಂದು ಆಜ್ಞಾಪಿಸಿದನು.

ಕೋವಲನನ್ನು ಶೂಲಕ್ಕೇರಿಸಿ ಬಿಟ್ಟರು. ಆತನಿಗೆ ಏನು ? ಏಕೆ ? ಎಂದು ಕೇಳಲು ಆಸ್ಪದ ಕೊಡಲಿಲ್ಲ.

ಇತ್ತ ಮಾತರಿಯೆಂಬ ಬಡವಿಯ ಮನೆಯಲ್ಲಿದ್ದ ಕಣ್ಣಗಿ ಪತಿಯ ಬರುವನ್ನೇ ಎದುರುನೋಡುತ್ತಾ ಕುಳಿತಿದ್ದಳು. ಬಹಳ ಹೊತ್ತಿನವರೆಗೆ ಕಾದಳು. ಆಕೆಯ ಚಿಂತೆ ಇಮ್ಮಡಿಸಿತು. ಅಷ್ಟರಲ್ಲಿ ಮಾತರಿಯು ಬಂದು "ನಿನ್ನ ಗಂಡನು ರಾಣಿಯ ಕಾಲಂದುಗೆಯನ್ನು ಕದ್ದುದಕ್ಕಾಗಿ ಶೂಲಕ್ಕೇರಿಸಲ್ಪಟ್ಟನಂತೆ ಈ ಸುದ್ದಿ ನಗರದಲ್ಲೆಲ್ಲಾ ಹರಡಿದೆ" ಎಂದು, ಅನುಕಂಪೆಯಿಂದ ನುಡಿದಳು. ಕಣ್ಣಗಿಗೆ ಸಿಡಿಲು ಬಡಿದಂತಾಯಿತು. ಬವಳಿ ಬಂದು ನೆಲದ ಮೇಲೆ ಬಿದ್ದು ಬಿಟ್ಟಳು.

ಸ್ವಲ್ಪ ಸಮಯ ಕಳೆಯಿತು. ಕಣ್ಣಗಿ ಎಚ್ಚರಗೊಂಡಳು. ಅರಸನು ವಿಚಾರಮಾಡದೆ ತನ್ನ ಪತಿಯನ್ನು ಕೊಲ್ಲಿಸಿರಬೇಕೆಂದು ಆಕೆಗೆ ಅನ್ನಿಸಿತು. ಅತಿಶಯವಾದ ಕ್ರೋಧದಿಂದ ಉರಿವ ಜ್ವಾಲಾಮುಖಿಯಾದಳು. ಆಕೆಯ ಕಣ್ಣುಗಳು ಬೆಂಕಿಯನ್ನು ಕಾರುತ್ತಿದ್ದವು. ತಲೆಗೂದಲು ಕೆದರಿದ್ದವು. ಆಕೆ ರುದ್ರಕಾಳಿಯಾದಳು. ತನ್ನಲ್ಲಿದ್ದ ಇನ್ನೊಂದು ಕಾಲಂದುಗೆಯನ್ನು ಹಿಡಿದು ಅರಮನೆಯನ್ನು ಪ್ರವೇಶಿಸಿದಳು. ದ್ವಾರಪಾಲಕರಿಗೆ ಆಕೆಯನ್ನು ತಡೆಯುವ ಧೈರ್ಯವಾಗಲಿಲ್ಲ.

ಅರಸನು ರಾಣಿ ಸಮೇತವಾಗಿ ರಾಜಸಭೆಯಲ್ಲಿ ಮಂಡಿಸಿದ್ದನು. ಕಣ್ಣಗಿಯು ಆ ಅರಸನನ್ನು ಸುಟ್ಟು ಬೂದಿ ಮಾಡುವಳಂತೆ ಅವನತ್ತ ಉರಿನೋಟ ಬೀರುತ —

"ಅರಸ, ನಾನು ನಿನ್ನಲ್ಲಿ ನ್ಯಾಯವನ್ನು ಬೇಡಲು ಬಂದಿದ್ದೇನೆ" ಎಂದು ಗರ್ಜಿಸಿದಳು.

"ಯಾರು ನೀನು ? ನಿನಗಾಗಿರುವ ಅನ್ಯಾಯವೇನು" ಪಾಂಡ್ಯರಾಜನು ಚಕಿತನಾಗಿ ಪ್ರಶ್ನಿಸಿದನು.

"ನಾನು ಕಣ್ಣಗಿ, ಪುಗಾರ್ ನಗರದವರ್ತಕನ ಮಡದಿ. ನನ್ನ ಪತಿಯ ಪ್ರಾಣಭಿಕ್ಷೆ ಬೇಡಲು ಬಂದಿದ್ದೇನೆ. ಕೊಲ್ಲಬಲ್ಲೆಯಾದರೂ ಕಾಯಬಲ್ಲೆಯಾ ನೀನು ?"

"ಕೊಂದವರು ಯಾರು ?"

"ಯಾರು ?....ಯಾರು ? ಬೇರೆಯಾರು ಅಲ್ಲ. ನಾಡೊಡೆಯನಾದ ನೀನೇ ಆ ಕೊಲೆಪಾತಕಿ. ಅಕ್ಕಸಾಲಿಗನ ಚಾಡಿ ಮಾತುಗಳನ್ನು ಕೇಳಿ ನೀನು ನಿರಪರಾಧಿಯಾದ ನನ್ನ ಪತಿಯನ್ನು ಕೊಲ್ಲಿಸಿದ್ದೀಯೆ".

"ಓ, ಅದೋ ? ಆತನು ರಾಣಿಯ ಕಾಲಂದುಗೆಯನ್ನು ಕದ್ದ ಕಳ್ಳ"

"ನನ್ನ ಪತಿ ಕಳ್ಳನೇ ? ಕಳ್ಳನು ತಾನು ಕದ್ದ ವಸ್ತುವನ್ನು ಕದ್ದಲ್ಲಿಗೇ ಒಯ್ದು ಮಾರುತ್ತಾನೆಯೆ ?"

ಅರಸನಿಗೆ ಈಗ ವಿವೇಕ ಬಂದಿತು. "ನಿನ್ನ ಪ್ರಶ್ನೆ ಸರಿಯಾಗಿಯೇ ಇದೆ. ಆದರೆ ರಾಣಿಯ ಕಾಲಂದುಗೆ ಅವನ ಬಳಿಯಿದ್ದುದು ಸುಳ್ಳೆ ?"

ಸುಳ್ಳು, ಶುದ್ಧಸುಳ್ಳು. ಅದು ರಾಣಿಯ ಕಾಲಂದುಗೆಯಲ್ಲ. ನನ್ನ ಕಾಲಂದುಗೆ"

"ಅದು ಹೇಗೆ ?"

"ಹೇಗೆನ್ನುವಿಯೋ ? ನಿನ್ನ ರಾಣಿಯ ಕಾಲಂದುಗೆಯೊಳಗೆ ಮುತ್ತುಗಳಿವೆಯೋ ವಜ್ರಗಳಿವೆಯೋ ?"

"ರಾಣಿಯಅಂದುಗೆಯೊಳಗೆ ಮುತ್ತುಗಳಿವೆ. ಅದನ್ನು ನಾನು ಬಲ್ಲೆ"

"ಈಗ ಸತ್ಯವೇನೆಂಬುದು ಗೊತ್ತಾಗುತ್ತದೆ. ಅಕ್ಕಸಾಲಿಗನು ತಂದೊಪ್ಪಿಸಿದ ಆ ಅಂದುಗೆಯನ್ನು ಪರೀಕ್ಷಿಸುವುದಾಗಲಿ". ಸೇವಕರು, ಅಕ್ಕಸಾಲಿಗನು ತಂದು ಕೊಟ್ಟಿದ್ದ ಅಂದುಗೆಯನ್ನು ತಂದು ಅರಸನ ಮುಂದೆ ಇರಿಸಿದರು. ಕೂಡಲೇ ಕಣ್ಣಗಿಯು ಅದನ್ನು ಎತ್ತಿಕೊಂಡು ಲಟಕ್ಕನೆ ಮುರಿದಳು. ಅದರೊಳಗಿದ್ದ ವಜ್ರಗಳು ಫಳಫಳನೆ ಉದುರಿ ರಾಜಸಭೆಯ ಉದ್ದಗಲಕ್ಕೂ ಚದುರಿದವು. ತನ್ನ ಮಡಿಲಿನಲ್ಲಿ ಬೌಚಿಟ್ಟುಕೊಂಡಿದ್ದ ಇನ್ನೊಂದು ಅಂದುಗೆಯನ್ನೂ ತೆಗೆದಳು. ಅದನ್ನೂ ಮೊದಲಿನಂತೆಯೇ ಮುರಿದು ಅವನ ಮುಂದೆ ಎಸೆದಳು. "ಇದೇ ನಿನಗೆ ಅಕ್ಕಸಾಲಿಗನು ತಂದುಕೊಟ್ಟ ಅಂದುಗೆಯ ಜೊಡಿ. ಈಗ ಅರಿವಾಯಿತೇ" ಎಂದು ಗರ್ಜಿಸಿಳು.

(26 ನೇ ಪುಟ ನೋಡಿ)

# ಮಹಾ ಶಿವರಾತ್ರಿ

—ಕೆ. ಬಸವರಾಜು.

ಭಾರತೀಯರಾದ ನಾವು ನಮ್ಮ ಸಂಸ್ಕೃತಿ ಧರ್ಮಗಳ ಪರಂಪರೆಯ ನೆನಪು ಮತ್ತು ಪ್ರಸಾರಣೆಗಾಗಿ ಅನೇಕ ಹಬ್ಬ ಹರಿದಿನಗಳನ್ನಾಚರಿಸುತ್ತೇವೆ. ಅಂತಹುಗಳಲ್ಲಿ ಶೈವರಿಗೆ ಶಿವರಾತ್ರಿಯು ಪ್ರಮುಖವಾದ ಪರ್ವವಾಗಿದೆ. ಅದರ ಪರಿಚಯವನ್ನು ಈ ಲೇಖನದಲ್ಲಿ ಮಾಡಿಕೊಡಲಾಗಿದೆ. —ಸಂ.

– ೧ –

ಶೈವ ಸಂಸ್ಕೃತಿಗೆ ದೀರ್ಘವಾದ, ಅರ್ಥಪೂರ್ಣವಾದ ಪರಂಪರೆಯಿದೆ. ಅದು ಸಿಂದು ಸಂಸ್ಕೃತಿಯಷ್ಟು ಹಳೆಯದು. ಈ ಅಂಶವನ್ನು 'ಸಿಂಧ್' ಪ್ರಾಂತದ ಹರಪ್ಪ, ಮಹೆಂಜದಾರೋ ಪ್ರದೇಶಗಳಲ್ಲಿ ನಡೆದ ಭೂಗರ್ಭ ಸಂಶೋಧನೆಯು ಪುರಾವೆಗಳೊಂದಿಗೆ ಸಾಬೀತು ಪಡಿಸಿದೆ. ಇಂತಹ ಶೈವ ಸಂಸ್ಕೃತಿಯ ಪ್ರಧಾನ ಲಕ್ಷಣ ಲಿಂಗೋಪಾಸನೆ. ದ್ರಾವಿಡ ಸಂಸ್ಕೃತಿಯ ನೆಲದಡಿಯಲ್ಲಿ ಆಳವಾಗಿ ಬೇರು ಬಿಟ್ಟ ಈ ಲಿಂಗ ತತ್ವದ ಭೂಮಭ್ರೂಜವು, ಆರ್ಯ ಸಂಸ್ಕೃತಿಯ ಭೂಮಿಕೆಯಲ್ಲಿ ವಿಸ್ತಾರವಾಗಿ ಬೆಳೆದು ದೇಶವಿದೇಶಗಳಲ್ಲಿ ತನ್ನ ಶಾಖೋಪಶಾಖೆಗಳನ್ನು ಪಸರಿಸಿದೆ. ಭಾರತದಲ್ಲೂ ಉದ್ದಗಲಕ್ಕೂ ಇದರ ಪ್ರತೀಕವಾಗಿ ನಿಂತಿರುವ ಪುರಾತನ ಶಿವಮಂದಿರಗಳು ಸಾಕ್ಷಿ ನುಡಿಯುತ್ತಿವೆ. ಕನ್ನಡ ನಾಡಿನಲ್ಲಂತೂ ಊರೂರುಗಳಲ್ಲಿಯೂ ಶಿವಾಲಯಗಳಿವೆ. ಪುರಾಣಗಳೂ ಶೈವ ಸಾಹಿ ಸಾಹಿತ್ಯವನ್ನು ರಾಶಿರಾಶಿಯಾಗಿ ಸೃಜಿಸಿವೆ.

– ೨ –

ಇಂತಹ ಶಿವೋಪಾಸಕರಿಗೆ ಶಿವರಾತ್ರಿಯು ಪವಿತ್ರವಾದ ಒಂದು ಪರ್ವವಾಗಿದೆ. ಶಿವಭಕ್ತರಿಗೆ ನಿಚ್ಚವೂ ಶಿವರಾತ್ರಿಯೇ. ವರ್ಷದ ಹನ್ನೆರಡು ತಿಂಗಳ ಕೃಷ್ಣತ್ರಯೋದಶಿಯಂದು ಶಿವರಾತ್ರಿಯಿದ್ದೇ ಇರುತ್ತದೆ. ಆದರೂ ಮಾಘಮಾಸದ ಮಹಾ ಶಿವರಾತ್ರಿಯು ಸಾರ್ವತ್ರಿಕವಾಗಿ ಆಚರಿಸುವ ಹಬ್ಬವೆನಿಸಿದೆ.

ಶಿವಮಹಾಪುರಾಣದಲ್ಲಿ—

ಮಾಘಸ್ಯ ಹ್ಯಸಿತೇ ಪಕ್ಷೇ ವಿಶಿಷ್ಟಾಸಾತಿ ಕೀರ್ತಿತಾ ।
ನಿಶೀಥವ್ಯಾಪಿನೀ ಗ್ರಾಹ್ಯಾ ಹತ್ಯಾಕೋಟಿ ವಿನಾಶಿನೀ॥*

ಎಂಬಂತೆ ಮಾಘಮಾಸದ ಬಹುಳ ಚತುರ್ದಶಿಯು ಈ ಶಿವರಾತ್ರಿಯ ಆಚರಣೆಗೆ ಪ್ರಶಸ್ತವಾದ ದಿನವಾಗಿದೆ. ಅದು ಬ್ರಹ್ಮವಿಷ್ಣುಗಳೂ ಕೂಡ ಕೊಂಡಾಡಿದ ದಿನ. ಅಂದಿನಿಂದ 'ಶಿವರಾತ್ರಿರಿತಿಖ್ಯಾತಾ ತಿಥಿರೇಷಾ ಮಮ" ಎಂಬುದಾಗಿ ಶಿವನು ಇಳೆಗೆಲ್ಲಾ ಶಿವರಾತ್ರಿಯೆಂದು ಪ್ರಸಿದ್ಧ ವಾಗಲೆಂದು ಹರಸಿ ಅಪ್ಪಣೆಕೊಡಿಸಿದನು.

ಈ ಮಹಾ ಸುದಿನದಂದು ಆಬಾಲವೃದ್ಧರೆಲ್ಲರೂ ಕೂಡಿ ಅಹೋರಾತ್ರಿ ನಿರಾಹಾರರಾಗಿ, ಜಿತೇಂದ್ರಿಯರಾಗಿ ಶಿವನನ್ನು ಭಕ್ತಿಯಿಂದ ಭಜಿಸುತ್ತಾರೆ. ಅಂದಿನ ರಾತ್ರಿ ನಾಲ್ಕು ಯಾಮಗಳೂ ಜಾಗರಣೆ ಮಾಡಿ ಶಿವಕಥಾ ಶ್ರವಣ ಸಂಕೀರ್ತನಗಳಿಂದ ಪುನೀತಾತ್ಮರಾಗುತ್ತಾರೆ. ಅಂತಹವರಿಗೆ ಮಹಾ ಫಲವುಂಟಾಗುತ್ತದೆಂಬುದನ್ನು ಪುರಾಣವು ಶ್ರುತ ಪಡಿಸುತ್ತದೆ.

ಯತ್ಫಲಂ ಮಮ ಪೂಜಾಯಾಂ
ವರ್ಷಮೇಕಂ ನಿರಂತರಂ ।

* ಶಿವಮಹಾಪುರಾಣ, ಅ-38-24.

ತತ್ಫಲಂ ಲಭತೇ ಸದ್ಯಃ
ಶಿವರಾತ್ರ್ಯಾಮುದರ್ಶನಾತ್ ‖ *

ಒಂದು ವರ್ಷ ಪೂಜೆ ಮಾಡಿದ ಫಲದಷ್ಟು ಫಲವು ಅಂದಿನ ರಾತ್ರಿ ಭಕ್ತಿಯಿಂದ ಮಾಡಿದ ಫಲದಿಂದ ಬರುತ್ತದೆ.

– ೩ –

**ಶಿವರಾತ್ರಿ - ಜಿನರಾತ್ರಿ :-**

ಶೈವರು ಶಿವರಾತ್ರಿಯನ್ನಾಚರಿಸುವ ದಿನವೇ ಜೈನರು ಜಿನರಾತ್ರಿಯನ್ನಾಚರಿಸುತ್ತಾರೆ. ಅದು ಅವರಿಗೆ ಋಷಭತೀರ್ಥಂಕರನ 'ಪರಿನಿರ್ವಾಣ ಮಹೋತ್ಸವದ ದಿನ.' ಇದಕ್ಕೆ ಪಂಪನ ಮಾತನ್ನೂ ಉಪಷ್ಟಂಭವಾಗಿ ಉಪಯೋಗಿಸಿಕೊಳ್ಳಬಹುದು

'ದೊರೆಕೊಂಡ ಮಾಘಮಾಸಂ ಬರೆಕೃಷ್ಣ ಚತುರ್ದಶಿಯಂದು ತತ್ಪುರುದೇವಂ ಮುಕ್ತಿವಧೂವರ ತೆಯನಭಿರ್ಜಿ ಮುಹೂರ್ತದೊಳ್ ಕೈಗೊಂಡಂ' * ಇದನ್ನು ಪ್ರಸ್ತಾಪಿಸುತ್ತಾ ಪಂ. ಚನ್ನಪ್ಪ ಎರೇಸೀಮೆಯವರು– 'ನಾವು ಇತಿಹಾಸದ ಬೆನ್ನುಹತ್ತಿ ಹಿಂದು ಹಿಂದಕ್ಕೆ ಹೋದರೆ ಕೆಲವು ಚಾರಿತ್ರಿಕಾಂಶಗಳನ್ನು ಈ ದಿನಾಚರಣೆಯ ಬಗ್ಗೆ ತಿಳಿಯಲು ಶಕ್ಯವಿದೆ' * ಎಂಬುದಾಗಿ ಅಭಿಪ್ರಾಯ ಪಟ್ಟಿದ್ದಾರೆ. ಅದರ ಜೊತೆಗೆ ನಾವು ಶಿವಪುರಾಣದ ಈ ವಿಷಯವನ್ನೂ ಗಮನಿಸಬಹುದು. ಶಿವಮಹಾಪುರಾಣದಲ್ಲಿ 'ಶಿವನ ಇಚ್ಛೆಯಂತೆ ವಿಷ್ಣುವು ತ್ರಿಪುರಾಸುರನನ್ನು ಮೋಹಗೊಳಿಸಲು 'ಅರ್ಹನ್' ಅಥವಾ ಜೈನಯತಿಯನ್ನು ಸೃಷ್ಟಿಸುತ್ತಾನೆ.

'ಅರ್ಹನ್ನಾಮ ತೇಸ್ಯಾತ್ *' ಈ ದಿಶೆಯಲ್ಲಿ ವಿದ್ವಾಂಸರಿಗೆ ಸಂಶೋಧನೆಗೆ ವಸ್ತುವನ್ನೂ ಒದಗಿಸಿಕೊಟ್ಟ ಶ್ರೀ ಟಿ. ಎಸ್. ಮಲ್ಲಪ್ಪನವರು ಸ್ತುತ್ಯಾರ್ಹರು.

– ೪ –

**ಸಿದ್ಧಗಂಗೆಯಲ್ಲಿ ಶಿವರಾತ್ರಿ :**

ಶಿವರಾತ್ರಿಯ ಅಂಗವಾಗಿ ಅಂದು ನಾಡಿನ ಮೂಲೆ ಮೂಲೆಗಳಲ್ಲಿನ ಶಿವಮಂದಿರಗಳಲ್ಲಿ ವಿಶೇಷ ಪೂಜಾ ಕಾರ್ಯಕ್ರಮಗಳು ಸಾಂಗವಾಗಿ ನಡೆಯುತ್ತವೆ. ಕೆಲವು ಪುಣ್ಯಕ್ಷೇತ್ರಗಳಲ್ಲಿ, ಮಠಗಳಲ್ಲಿ ರಥೋತ್ಸವವೂ ವೈಭವದಿಂದ ನಡೆಯುತ್ತವೆ. ಇಂತಹುಗಳಲ್ಲಿ ಶ್ರೀ ಸಿದ್ಧಗಂಗೆಯ ಶಿವರಾತ್ರಿಯ ಆಚರಣೆಯು ವೈಶಿಷ್ಟ್ಯವನ್ನು ಕಾಪಾಡಿಕೊಂಡು ಬಂದಿದೆ.

ತತ್ರ ತತ್ರ ಶಿವ ಕ್ಷೇತ್ರಂ
ತತ್ರ ತತ್ರ ನಿವಾಸಿನಾಂ ।
ಮೋಕ್ಷಾರ್ಥಂ ಕೃಪಯಾದೇವಃ
ಕ್ಷೇತ್ರಂ ಕಲ್ಪಿತವಾನ್ ಪ್ರಭುಃ ‖ *

ಎಂಬ ಪುರಾಣೋಕ್ತ ರೀತ್ಯಾ ಈ ನಾಡಿನ ಜನರ ಮೋಕ್ಷಾರ್ಥವಾಗಿ ದೇವನಾದ ಶ್ರೀ ಸಿದ್ಧಲಿಂಗೇಶನು ಕಲ್ಪಿಸಿರುವ ಈ ಅವಿಮುಕ್ತ ಕ್ಷೇತ್ರಕ್ಕೆ ಅಂದು ನೂರಾರು ಮೈಲಿಗಳಿಂದ ಉಷೆಯಿಂದ ನಿಶೆಯವರೆಗೆ ಭಕ್ತರ ಪ್ರವಾಹ ಹರಿದು ಬರುತ್ತದೆ. ಹೀಗೆ ಬಂದ ಭಕ್ತರು ಶಿವನ ರಾತ್ರಿ ಶಿವನ ಕ್ಷೇತ್ರದಲ್ಲಿ ತಂಗಿ ಇಡೀ ರಾತ್ರಿಯೆಲ್ಲಾ ಜಾಗರಣೆ ಮಾಡಿ, ಶಿವಕಥಾ ಸುಧಾಪಾನದಿಂದ ಪೂತಾತ್ಮರಾಗಿ ವಿಶೇಷ ಪುಣ್ಯಫಲಭಾಗಿಗಳಾಗುತ್ತಾರೆ. ಇದರಿಂದ ಶಿವನಿಗೂ ಸಂಪ್ರೀತಿಯುಂಟಾಗಿ–

'ಮದ್ಧರ್ಮ ವೃದ್ಧಿ ಕಾಲೋಽಯಂ ।
ಚಂದ್ರಕಾಲ ಇವಾಂಬುಧೇಃ' । *

ಎಂಬಂತೆ ಶಿವಧರ್ಮವು ಚಂದ್ರೋದಯದ ಸಾಗರದಂತೆ ಮೇರೆವರಿಯುತ್ತದೆ.

ಮಾರನೆಯ ದಿನ ಪಾರಣೆ. ಅಂದು ಎಲ್ಲಾ ಭಕ್ತರೂ ಪ್ರಸಾದ ಸ್ವೀಕರಿಸಿ ಬರುವ ಹೊತ್ತಿಗೆ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯನ್ನು ಹೊತ್ತ ತೇರು ಸಿಂಗಾರಗೊಂಡು ಸಿದ್ಧವಾಗಿ ನಿಂತಿರುತ್ತದೆ. ಆಗ, ಭಕ್ತಿ ಸೂತ್ರವನ್ನು ಹಿಡಿದು ಭಗವಂತನನ್ನೇ ಜಗ್ಗಿಸಿ ಇಳೆಗೆ ಎಳೆವಂತೆ

( 26 ಪುಟ ನೋಡಿ )

*. ಶಿವಮಹಾಪುರಾಣ, ಅ-8-13.
*. ಆದಿಪುರಾಣ ಸಂಗ್ರಹ. ಪದ್ಯ - 5೦4
*. ಬಸವ ಜರ್ನಲ್, ಶಿವರಾತ್ರಿ ಸಂಚಿಕೆ, 1977 ಪು.39
*. ಶಿವಪುರಾಣ, ಅ, 4.9
*. ಶಿವಪುರಾಣ, ಅ. 12.3
*. ಶಿವಪುರಾಣ, ಅ. 8.14

# ವೀರಶೈವ ಸಾಹಿತ್ಯ ಸಂಶೋಧಕ

## ಶ್ರೀ. ಎಂ. ಪಿ. ಪಾಟೀಲರು

—ಎಂ. ಗ. ಸೆಟ್ಟಿ.

ಕರ್ನಾಟಕದಲ್ಲಿ ವೀರಶೈವ ಧರ್ಮದ ಉದ್ಧಾರ ಸಂಘಟನೆಗಳಿಗಾಗಿ ತನುಮನಗಳನ್ನರ್ಪಿಸಿ ಸಂದಕೀರ್ತಿಶೇಷ ಕಾಯರಾದ ಕೆಲವೇ ಪುಣ್ಯಾತ್ಮರಲ್ಲಿ ಎಂ. ಪಿ. ಪಾಟೀಲರು ಗಣ್ಯರು. ಶ್ರೀಯುತರು ವೀರಶೈವ ಧರ್ಮದ ದಿಗ್ದಂತಿಗಳೂ ರಾಜಕೀಯದ ಸಮಗ್ರ ದರ್ಶಿಗಳೂ ಆಗಿದ್ದಾರೆ. ವಕೀಲರಾದ ಅವರು ಸ್ವತಃ ಪತ್ರಕರ್ತರಾಗಿದ್ದರಲ್ಲದೆ ಲೀಲಾ ವಿಶ್ವಂಭರ ಗ್ರಂಥದ ಪ್ರಕಟಣೆ, ಹೊಸಬೆಳಕು ಎಂಬ ಪ್ರಪಂಚದ ರಚನೆ ಮುಂತಾಗಿ ಸಾಹಿತ್ಯ ಸೇವೆಯನ್ನು ಮಾಡಿದ್ದಾರೆ. ಅವರ ಪರಿಚಯವನ್ನು ಇಲ್ಲಿ ಮಾಡಿಕೊಡಲಾಗಿದೆ. – ಸಂ

ಧಾರವಾಡದ ಎಗ್ರಿಕಲ್ಚರ ಕಾಲೇಜಿನ ಜನಕ, ಉತ್ತರ ಕನ್ನಡ ಜಿಲ್ಲೆಯ ಮುಂಡಗೋಡ ತಾಲ್ಲೂಕಿನ ನಿರ್ಮಾಪಕ, ಶ್ರೀ ಮಲ್ಲನಗೌಡ, ಪುನಗೌಡ ಪಾಟೀಲರು ಮುಂಬೈ ಸರಕಾರದಲ್ಲಿ ಸಹಕಾರ ಮತ್ತು ಒಕ್ಕಲು ತನದ ಮಂತ್ರಿಗಳಾಗಿ, ತಾನು ಕಂಡ ಕನಸಿನ ಕರ್ನಾಟಕ ರಾಜ್ಯದಲ್ಲಿ ಕಂದಾಯ ಸಚಿವರಾಗಿ ಅನಾರೋಗ್ಯದ ಮೂಲಕ ಮಂತ್ರಿ ಪದವಿಯನ್ನು ಬಿಟ್ಟು ಗೊಟ್ಟಿದ್ದರೂ ಅವರ ಸಾಹಿತ್ಯಿಕ, ಸಂಶೋಧನಾತ್ಮಕ ಚಟುವಟಿಕೆಗಳು ನಿರಂತರವಾಗಿ ಸಾಗಿವೆ. ಮಹಾರಾಷ್ಟ್ರದಲ್ಲಿ ವೀರಶೈವ ಸಮಾಜದ ಸಂಘಟನೆಯನ್ನು ಮಾಡಿ ಅಖಿಲ ಭಾರತ ವೀರಶೈವ ಸಮಾಜಕ್ಕೆ ಚೈತನ್ಯವನ್ನು ಒದಗಿಸಿದುದಲ್ಲದೆ; ಕರ್ನಾಟಕದ ವೀರಶೈವ ಅರಸರು, ಮಠಸ್ಥಾಪಕರು, ಶಿಕ್ಷಣ ಸಂಸ್ಥೆಗಳನ್ನು ಕಟ್ಟಿದವರ ಪರಿಚಯವನ್ನು ಮಹಾರಾಷ್ಟ್ರಕ್ಕೆ 'ಜ್ಞಾನಪ್ರಸಾದ' ಮಾಸ ಪತ್ರಿಕೆಯ ಮುಖಾಂತರ ಮಾಡಿಕೊಟ್ಟರು. ಬಸವಣ್ಣನವರ ಚರಿತ್ರೆಯಲ್ಲಿದ್ದ ವಿವಾದಾಸ್ಪದ ಅಂಶಗಳನ್ನು ಸಂಶೋಧಿಸಿ 'ಹೊಸಬೆಳಕು' ಎಂಬ ಗ್ರಂಥವನ್ನು ಪ್ರಕಟಪಡಿಸಿದರು. ಕಾಳಾಮುಖ ಶೈವ ಪಂಥದ ನಿಜಸ್ವರೂಪ ಅಥವಾ ಲಾಕುಳಶೈವ ಎಂಬ ಬಗ್ಗೆ ಸಂಶೋಧನಾತ್ಮಕ ಪ್ರಬಂಧವನ್ನು ಬರೆದರು. ದಕ್ಷಯಜ್ಞ ವಿಧ್ವಂಸಕ ವೀರಭದ್ರ ವೀರಶೈವರ ವೀರಭದ್ರ ದೇವರಲ್ಲ ಎಂಬ ವಿಷಯವಾಗಿಯೂ ಸಂಶೋಧನಾತ್ಮಕ ಪ್ರಬಂಧವನ್ನು ಬರೆದರು. ಯಾವ ಪ್ರಸಿದ್ಧಿ ಪ್ರಶಂಸೆಗಳ ಬಯಕೆ ಇಲ್ಲದೆ ತಾನು ಕಂಡುಕೊಂಡ ಸತ್ಯವನ್ನು ಇನ್ನುಳಿದವರಿಗೂ ಶ್ರುತ ಪಡಿಸುವುದಕ್ಕಾಗಿ ಆಗಾಗ ಬರೆಯುತ್ತಲೇ ಇರುತ್ತಾರೆ.

ಎಂ. ಪಿ. ಪಾಟೀಲರು ಸಂಕೇಶ್ವರದ ಪಾಟೀಲ ಕುಟುಂಬದಲ್ಲಿ ೧೯೦೧ ಇಸವಿ ಫೆಬ್ರವರಿ ನಾಲ್ಕನೆಯ ತಾರೀಖು ಹುಟ್ಟಿದರು. ಪಾಟೀಲರ ಮನೆತನಕ್ಕೆ ಸೇರಿದವರಾದರೂ ಮನೆಯ ಪರಿಸ್ಥಿತಿ ಸಮಾಧಾನಕರವಾಗಿರಲಿಲ್ಲ. ಅವರ ತಂದೆ-ತಾಯಿ ತಮ್ಮ ಸ್ವಂತ ಒಂದು ಎಕರೆ ಭೂಮಿಯಿಂದ ಜೀವನ ನಿರ್ವಾಹವಾಗುವುದು ಸಾಧ್ಯವಿರದಿದ್ದುದರಿಂದ ಹೆರವು ಭೂಮಿಯನ್ನು ಲಾವಣಿಗೆ ತೆಗೆದುಕೊಂಡು ಬೇಸಾಯ ಮಾಡುತ್ತಿದ್ದರು. ಪುನಗೌಡ ಮತ್ತು ಗಂಗಾಬಾಯಿ ದಂಪತಿಗಳಿಗೆ ಐವರು ಮಕ್ಕಳು ಹುಟ್ಟಿದರು. ಅಲ್ಪ ವಯಸ್ಸಿನಲ್ಲಿ ಮೂವರು ಮರಣ ಹೊಂದಿದುದರಿಂದ ಮಲ್ಲರಗೌಡ ಮತ್ತು ಸೋದರಿ ಭಾಗೀರಥಿಬಾಯಿ ಮಾತ್ರ ಉಳಿದರು.

ಸಂಕೇಶ್ವರದಲ್ಲಿ ಕನ್ನಡಸಾಲೆ ಇರದ್ದರಿಂದ ೧೯೦೭ ರಲ್ಲಿ ಮರಾಠಿಸಾಲೆಗೆ ಸೇರಿ ಪ್ರತಿ ವರ್ಷವೂ ಪ್ರಥಮ ಬರುತ್ತಿದ್ದರು. ಆದರೆ ಒಕ್ಕಲುತನದ ಹಂಗಾಮಿನಲ್ಲಿ ಮನೆಯವರ ಜೊತೆಗೆ ಒಕ್ಕಲುತನದಲ್ಲಿ ನೆರವಾಗ

ಬೇಕಾದುದರಿಂದ ಸಾಲೆ ಪ್ರಾರಂಭವಾದ ಕೆಲದಿನಗಳ ವರೆಗೆ ಶಾಲೆಗೆ ಹೋಗಲಾಗುತ್ತಿರಲಿಲ್ಲ. ಇಂಗ್ಲಿಷ್ ಭಾಷಾಭ್ಯಾಸಕ್ಕೆ ಅಭ್ಯಂಕರ ಮಾಸ್ತರರೆಂಬುವರು ಅನುಕೂಲವನ್ನು ಕಲ್ಪಿಸಿದರು. ಶ್ರೀ ಪಾಟೀಲರು ಕೊಲ್ಹಾಪುರದಲ್ಲಿ ಇಂಗ್ಲೀಷ್ ಶಿಕ್ಷಣ ಪಡೆಯಲು ಹೋಗುವ ಮುಂಚಿತವಾಗಿ ಅಂದರೆ ಅವರ ಹದಿನಾಲ್ಕ ನೆಯ ವಯಸ್ಸಿನಲ್ಲಿ ಮದುವೆಯಾಗಿತ್ತು.

ಕೊಲ್ಹಾಪುರದಲ್ಲಿಆಠವಲೆ ಮಾಸ್ತರರು ರಾಜಾ ರಾಮ ಹೈಸ್ಕೂಲಿನಲ್ಲಿ ಪಾಟೀಲರನ್ನು ದಾಖಲುಮಾಡಿ ದರಲ್ಲದೆ ಫೀ ಮಾಫಿ ಮಾಡಿಸಿದರು. ಮತ್ತು ಅಲ್ಲಿದ್ದ ಲಿಂಗಾಯತ ಬೋರ್ಡಿಂಗಿನಲ್ಲಿ ಪುಕ್ಕಟ್ಟೆ ಊಟದ ವ್ಯವಸ್ಥೆ ಯಾಯಿತು. ಇನ್ನಿತರ ಖರ್ಚಿಗೂ ಸಹಾಯದೊರೆಯಿತು. ಪಾಟೀಲರು ಮಿತವ್ಯಯದಿಂದ ಖರ್ಚು ಮಾಡುತ್ತಿದ್ದುದ ಲ್ಲದೆ, ಕೊಲ್ಹಾಪುರದಿಂದ ಸಂಕೇಶ್ವರಕ್ಕೆ ಕಾಲ್ನಡಿಗೆ ಯಿಂದಲೇ ಬಂದು ಹೋಗುತ್ತಿದ್ದರು.

ಪಾಟೀಲರ ಶಿಕ್ಷಣ ಒಂದು ವ್ಯವಸ್ಥೆಗೆ ಬರು ವಷ್ಟರಲ್ಲಿಯೇ ತಾಯ್ತಂದೆಗಳು ತೀರಿಕೊಂಡರು. ಅದರಿಂದ ಊರಿಗೆ ಬಂದು ಒಕ್ಕಲುತನವನ್ನು ಮುಂದುವ ರಿಸಿದರಾದರೂ ಅದರಿಂದ ಜೀವನ ನಿರ್ವಾಹ ಸಾಧ್ಯವಿಲ್ಲ ವೆಂದು, ಹೆಂಡತಿಯ ಸಲಹೆಯಂತೆ ಆಕೆಯ ಮೈಮೇಲಿನ ಆಭರಣಗಳನ್ನು ಮಾರಿ ಭೂಮಾಲಿಕನ ಸಾಲವನ್ನು ತೀರಿಸಿ ಮಾವನ ಮನೆಯಲ್ಲಿದ್ದು ಶಿಕ್ಷಣವನ್ನು ಮುಂದು ವರಿಸಿ ಶಿರಸಂಗೀಕರ ಸರದೇಸಾಯಿ ಟ್ರಸ್ಟಿನಿಂದ ಸ್ಕಾಲರ ಶಿಪ್ ಪಡೆದು ೧೯೨೨ ರಲ್ಲಿ ಬಿ. ಎ. ಮತ್ತು ೧೯೨೪ ರಲ್ಲಿ ಎಲ್. ಎಲ್. ಬಿ. ಶಿಕ್ಷಣ ಮುಗಿಸಿದರು.

**ವಕೀಲಿ ಮುತ್ತು ಸಾರ್ವಜನಿಕ-ಕಾರ್ಯ**

ಹುಕ್ಕೇರಿಯಲ್ಲಿ ವಕೀಲಿಯನ್ನು ಪ್ರಾರಂಭಿಸಿ ದರೂ ತಮ್ಮ ಸುತ್ತು ಮುತ್ತಲಿನ ರೈತರ ಸುಖದುಃಖ ಗಳನ್ನು ನೋಡಿದವರಾದುದರಿಂದ ರೈತರಿಗೆ ನೆರವಾಗುವ ದೃಷ್ಟಿಯಿಂದ ಸಹಕಾರ ಚಳುವಳಿಯನ್ನು ಕೈಕೊಡರು. ಹರಿಜನ ಕೂಲಿಕಾರರ ಸಹಕಾರ ಸಂಘ ಮತ್ತು ಹರಿ ಜನರ ಪತ್ತಿನ ಸಹಕಾರ ಸಂಘವನ್ನು ಪ್ರಪ್ರಥಮವಾಗಿ ಸ್ಥಾಪಿಸಿ ಪತ್ತಿಲ್ಲದವರಿಗೆ ಪತ್ತನ್ನು ನಿರ್ಮಾಣಮಾಡುವ ಕಾರ್ಯವನ್ನು ಕೈಕೊಂಡರು. ಇವೆಲ್ಲ ಕಾರ್ಯಕ್ರಮಗ ಳಿಂದ ಅವರಿಗೆ ಸರಕಾರದವರು ಜಿಲ್ಲಾ ಸಹಕಾರಿ ಆರ್ಗ ನೈಜರ್ ಎಂದು ನಿಯಮಿಸಿ ಮುಂಬಯಿಯಲ್ಲಿ ನಡೆಯು ತ್ತಿದ್ದ ಸಹಕಾರಿ ಶಿಕ್ಷಣವರ್ಗಕ್ಕೆ ಆರಿಸಲ್ಪಟ್ಟರು. ಹೀಗೆ ಅವರು ಸಾರ್ವಜನಿಕ ಸೇವೆಯಿಂದ ಲೋಕ-ಪ್ರಿಯ ರಾದರು. ತಾಲ್ಲೂಕ್ ಬೋರ್ಡ್ ಮತ್ತು ಜಿಲ್ಲಾ ಲೋಕ-ಲ್ ಬೋರ್ಡುಗಳಿಗೆ ಸದಸ್ಯರೂ ಆದರು.

**ಕಾಂಗ್ರೆಸ್ ಪ್ರವೇಶ ಮತ್ತು ಸಂಘಟನೆ**

ಸ್ವಾತಂತ್ರ್ಯ ಯುದ್ಧದಲ್ಲಿ ಭಾಗವಹಿಸಿ ಜೈಲಿಗೆ ಹೋಗುವಷ್ಟು ಆರ್ಥಿಕ ಪರಿಸ್ಥಿತಿ ಉತ್ತಮವಾಗಿರಲಿಲ್ಲ. ಅದರಿಂದ ಶ್ರೀ ಪಾಟೀಲರು ಜೈಲಿಗೆ ಹೋದರೆ ಮನೆಯವರು ಕಷ್ಟ ಪಡಬೇಕಾಗುತ್ತಿತ್ತು. ಪ್ರಥಮತಃ ಒಂದು ತಿಂಗಳು ಶಿಕ್ಷೆಯಾಗಿತ್ತು. ಆದರೆ ೧೯೩೨ ರಲ್ಲಿ ಅವರಿಗೆ ಎರಡು ಕೇಸುಗಳಿಂದ ಅವರಿಗೆ ಮೂರು ವರ್ಷ ಹತ್ತು ತಿಂಗಳ ಶಿಕ್ಷೆಯಾಯಿತು. ಜೈಲಿ ನಲ್ಲಿ ಮಹಾದೇವ ಥಾಯಿ-ಯವರೊಡನೆ ಇದ್ದುದರಿಂದ ಭಾರತದ ರಾಜಕೀಯ ಜೀವನದ ಸಮ್ಯಗ್ ದರ್ಶನವಾ ಯಿತು. ಧಾರ್ಮಿಕ ಚರ್ಚೆಯೂ ನಡೆಯುತ್ತಿತ್ತು. ಮುಂದೆ ಮಹಾದೇವ ದೇಸಾಯಿಯವರ ಬಿಡುಗಡೆಯಾಗಿ ಶ್ರೀ ರಾವಸಾಹೇಬ ಪಟವರ್ಧನರು ಜೈಲಿಗೆ ಬಂದುದ ರಿಂದ ಮಹಾರಾಷ್ಟ್ರ ರಾಜ್ಯ ಕಾರಣ ಅವರಿಗೆ ಅವಗತ ವಾಯಿತು.

ಮುಂದೆ ವಿಧಾನ ಸಭೆಯ ಸದಸ್ಯರಾಗಿ ಖೇರ ಮಂತ್ರಿಮಂಡಳದಲ್ಲಿ ಪಾರ್ಲಿಮೆಂಟರಿ ಸೆಕ್ರೆಟರಿಗಳಾಗಿ ಒಕ್ಕಲುತನದ ಮಂತ್ರಿಗಳಾಗಿ ಒಕ್ಕಲುತನ ಖಾತೆಯನ್ನು ಪರಿಪುಷ್ಟಗೊಳಿಸಿದರು.

**ಅಖಿಲ ಭಾರತ ವೀರಶೈವ ಸಂಘದ ಸ್ಥಾಪನೆ :**

ಶ್ರೀ ಪಾಟೀಲರು ಮಂತ್ರಿಯಾಗಿ ಸಮಗ್ರ ಮಹಾರಾಷ್ಟ್ರವನ್ನು ಸಂಚರಿಸಿದಾಗ ವೀರಶೈವ ಸಮಾಜ ಅವನತಿಯಲ್ಲಿದ್ದುದನ್ನು ಕಂಡು ೧೯೫೪ ರಲ್ಲಿ ಅಖಿಲ ಭಾರತ ವೀರಶೈವ ಸಂಘವನ್ನು ಸ್ಥಾಪಿಸಿ, ಸಂಘದ ವತಿ ಯಿಂದ ವೀರಶೈವ ಮಾಸಪತ್ರಿಕೆಯನ್ನು ಹೊರಡಿಸಿದರು. ೧೯೫೫ ಮತ್ತು ೧೯೫೬ ನೇ ಸಾಲಿನಲ್ಲಿ ಬಸವಜಯಂತಿ ಉತ್ಸವ ವಿಜೃಂಬಣೆಯಿಂ ನೆರವೇರಿಸಿದರು. ಆದರೆ ೧೯೫೬ ರಲ್ಲಿ ರಾಜ್ಯ ಪುನರ್ವಿಂಗಡನೆಯಾದ ನಂತರ

ಅವರು ಬೆಂಗಳೂರಿಗೆ ಬಂದುದರಿಂದ ವೀರಶೈವ ಮಾಸ ಪತ್ರಿಕೆಯ ಪ್ರಕಾಶನವು ನಿಂತಿತು.

**ಲೀಲಾ ವಿಶ್ವಂಭರಗ್ರಂಥ ಪ್ರಕಾಶನ :**

ತಮ್ಮ ಬಳಿಯಿದ್ದ ಲೀಲಾ ವಿಶ್ವಂಭರ ಗ್ರಂಥವನ್ನು ಪ್ರಕಟಗೊಳಿಸುವುದಕ್ಕಾಗಿ ಶ್ರೀ ರತ್ನಪ್ಪಾ ಕುಂಭಾರರೊಡನೆ (ಮಹಾರಾಷ್ಟ್ರ ಸರಕಾರದ ಇಂದಿನ ಆಹಾರ ಶಾಖೆ ಸಚಿವರು) ವಿಚಾರವಿನಿಮಯ ಮಾಡಿ ಹಣ ಸಂಗ್ರಹಿಸಿ ಕೊಲ್ಹಾಪುರದ ವಿದ್ವಾನ್ ಶ್ರೀ ಸಾರ್ದಳ ಗುರೂಜಿಯಿಂದಪರಿಷ್ಕರಿಸಿ ಪ್ರಕಟಿಸಿದರು. ಈ ಗ್ರಂಥವನ್ನು ಅರಿತುಕೊಳ್ಳಲು ಅನುಕೂಲವಾಗುವಂತೆ 'ವೀರಶೈವ ಧರ್ಮ' ಎಂಬ ಪುಸ್ತಕವನ್ನು ೧೯೬೪ ರಲ್ಲಿ ಪ್ರಕಟಿಸಿದರು. ಈ ಲೀಲಾ ವಿಶ್ವಂಭರ ಗ್ರಂಥ ಮಹಾರಾಷ್ಟ್ರ ಭಾಷೆಯಲ್ಲಿ ವೀರಶೈವ ಧರ್ಮದ ಅಧಿಕೃತ ಗ್ರಂಥವೆಂದು ತಿಳಿಯಲ್ಪಟ್ಟು ಮಹಾರಾಷ್ಟ್ರದಲ್ಲೆಲ್ಲ ಪ್ರಚಾರದಲ್ಲಿದೆ.

ಮಹಾರಾಷ್ಟ್ರದ ವೀರಶೈವ ಸಮಾಜದ ಸೇವೆಗಾಗಿಜ್ಞಾನಪ್ರಸಾದವೆಂಬ ಪಾಕ್ಷಿಕ ಪತ್ರಿಕೆಯನ್ನು ಮಾಸಪತ್ರಿಕೆಯನ್ನಾಗಿ ಮಾಡಲು ಯತ್ನಿಸಿದುದಲ್ಲದೆ ಕಾಲಕಾಲಕ್ಕೆ ಲೇಖನಗಳನ್ನು ಅದರಲ್ಲಿ ಬರೆಯುತ್ತಿದ್ದರು.

**ಹೊಸ ಬೆಳಕು ಕನ್ನಡ ಗ್ರಂಥದ ಪ್ರಕಟಣೆ :**

೧೯೬೭-೬೮ ರ ಬಸವೇಶ್ವರಅಷ್ಟ ಶತಮಾನೋತ್ಸವ ಕಾಲದಲ್ಲಿ ಐತಿಹಾಸಿಕ ಚರಿತ್ರೆಯನ್ನು ಪರಿಶೀಲಿಸಿ 'ಹೊಸ ಬೆಳಕು' ಎಂಬ ಗ್ರಂಥವನ್ನು ಪ್ರಕಟಿಸಿದರು. ಈ ಪುಸ್ತಕದ ಆಧಾರದ ಮೇಲಿಂದ ಸೊಲ್ಲಾಪುರದ ಪ್ರಸಿದ್ಧ ಲೇಖಕ ಮತ್ತು ನಾಟಕಕಾರ ಶ್ರೀ ಕುಮಾರ ಕೋಶಾವಳೆ ಇವರು ಮಹಾತ್ಮ ಬಸವೇಶ್ವರ ಎಂಬ ನಾಟಕವನ್ನು ಬರೆದಿದ್ದಾರೆ.

**ವೈಯಕ್ತಿಕ ಜೀವನ:**

ಶ್ರೀ ಪಾಟೀಲರ ಜೀವನದ ಮೇಲೆ ಪ್ರಭಾವ ಬೀರಿದ ವ್ಯಕ್ತಿಗಳೆಂದರೆ ಶಿವಾಜಿ ಮಹಾರಾಜ, ಮಹಾತ್ಮ ಗಾಂಧಿ ಮತ್ತು ಶ್ರೀ ಬಸವೇಶ್ವರರು. ಕೊಲ್ಹಾಪುರದಲ್ಲಿ ಶಿಕ್ಷಣವನ್ನು ಮುಂದುವರಿಸುತ್ತಿದ್ದಾಗ ಶಿವಾಜಿ ಚರಿತ್ರೆಯ ನ್ನೋದಿದುದರಿಂದ ಮನಸ್ಸಿನ ಮೇಲೆ ಪರಿಣಾಮವನ್ನು ಮಾಡಿತು.

ಈ ಎಲ್ಲ ಧಾರ್ಮಿಕ ವಿಚಾರಗಳ ಪ್ರಭಾವದಿಂದ, ಅನೇಕ ವರ್ಷಗಳಿಂದ ಹಾಸಿಗೆಯ ಮೇಲೆಯೇ ಇದ್ದರೂ ಮನೆಯ ಹೊಸ್ತಿಲಕ್ಕೆ ಶುಭ ಬರೆದ ಸೌಭಾಗ್ಯವತಿ ಲಕ್ಷ್ಮೀಬಾಯಿ ಮತ್ತು ದುಡಿಯುವ ಮಗ ಇವರನ್ನು ಕಳೆದುಕೊಂಡರೂ—ಧಾರ್ಮಿಕ ಸಾಹಿತ್ಯದ ಸಂಶೋಧನೆಯನ್ನು ಕೈಕೊಂಡಿದ್ದಾರೆ.



**: ನು ಡಿ ಮು ತ್ತು ಗ ಳು :**

ಉತ್ತರದ ಕಾಶಿಯಲಿ
ಕತ್ತೆ ಮಿಂದೈತರಲು
ದಕ್ಷಿಣದಲದು ಕುದುರೆಯಹುದೆ?
—ಕುವೆಂಪು

ಊರ ಮುಂದೆ ಹಾಲಹಳ್ಳ ಹರಿಯುತ್ತಿರಲು
ಓರೆಯೂವಿನ ಬೆನ್ನಲರಿಯಲೇಕೆ
—ಬಸವಣ್ಣ.

## ಹರಕೆಗಳು



—ಎಸ್ ವಿ. ವಾಗೀಶ್ವರಭಟ್ಟ

ಭರತ ಮಾತೆಯ ಚರಣ
ಕಾಂತಿಯೊಳೆಮ್ಮ ಶಿರಗಳು ಬೆಳಗಲಿ ।
ಚರಣಧೂಳಿಯು ಹಿಡಿದು
ಹಣೆಯಲಿ ತಿಲಕದಂದದಿ ತೋರಲಿ ||೧||

ಭರತ ವರ್ಷದಿ ಮತ್ತೆ
ಜನಿಸಲಿ ಗಾಂಧಿಯಂತಹ ಪುರುಷರು ।
ಭರತ ಖಂಡವ ಕೀರ್ತಿ
ಶಿಖರಕೆ ಒಯ್ಯುವಂತಹ ತನುಜರು ||೨||

ಜಾತಿರೋಗವು ನಾಶ-
ವಾಗಲಿ ಸರ್ವಸಮತೆಯು ನೆಲಸಲಿ ।
ಮಾತು ಮಾತಿಗೆ ಜಾತಿ
ಎತ್ತುವ ದುಷ್ಟಭಾವನೆ ತೊಲಗಲಿ ||೩||

ಕಳ್ಳಕಾಕರ ಬಾಧೆ
ಯಳಿಯಲಿ ಬರಲಿ ಮೂಡುವ ಸೌಖ್ಯವು ।
ಸುಳ್ಳುವಂಚನೆಗಳಳಿಸಿ-
ಹೋಗಲಿ ಬಂದು ನೆಲಸಲಿ ಸತ್ಯವು ||೪||

ಮಳೆಯು ಸುರಿಯಲಿ ಧರಣಿ
ತಣಿಯಲಿ ಹಸಿರು ಹಂದರವಾಗಲಿ ।
ಕಣಜ ತುಂಬಲಿ ಕಾಳ-
ನಿಂದಲಿ ಕ್ಷಾಮವೊಮ್ಮೆಗೆ ತೊಲಗಲಿ ||೫||

ಭರತ ಮಾತೆಯ ಚರಣ-
ಸ್ವರ್ಣಕೆ, ರತ್ನವಾಗಲಿ ಶಿರಗಳು ।
ಖರೆದು ಓದಲಿ ಭರತ-
ಮಾತೆಯ ಹೆಸರ ಸ್ವರ್ಣಾಕ್ಷರದೊಳು ||೬||

ಕಾವ್ಯ



ವಾಹಿನಿ

## ಪ್ರಸಾದ

—ಕೋರಂಬ

ಅಃ ! ನಿಂತು ನೋಡಿಲ್ಲಿ !
ಪದಾರ್ಥಂ ಪ್ರಸಾದ ಪದವಿಗೇರ್ವ
ಅಪೂರ್ವ ಸಮಯವನ್ !
ಲಭ್ಯಮಾ ಪದಾರ್ಥಂ ಹೋಟೆಲಲಿ
ಮನೆಗಳಲಿ ಮೇಣಾಸಣಂಗಳಲಿ
ಕಿಂತು ದೊರೆಯದೀ ಪ್ರಸಾದವೆಲ್ಲಿಯುಂ.
ಪ್ರಸಾದವ ಕಾಂಬಡೆ ಉಂಬಡೆ
ಬಾ ಇಲ್ಲಿ ಕೊಪ್ಪಲಲಿ ಸಿದ್ಧಗಂಗೆಯಲಿ
ಸ್ವೀಕರಿಸಿ ಧನ್ಯನಾಗುವೆ
ಮೇಣ್ ತೃಪ್ತನೆನಿಸುವೆ.
ಜನರು ಜಂಗಮರಾಗಿ ಕುಳಿತಿರೆ
ನೇಮದಲಿ ಶಿವಸಮಯಧಾರಿಗಳಾಗಿರೆ
ಹುಡುಗರುತ್ಸಾಹದಲಿ ಉಣಬಡಿಸುತಿರೆ
ಮಧ್ಯದೊಳ್ ಶ್ರೀಗಳಿರೆ
ನಿಷ್ಠೆಯಿಂ ಜಪಿಸುವರ್
ಶಿವತತ್ವ ನುಡಿಗಳನ್
ಪ್ರಸಾದವೆಲ್ಲರ್ಗಂ ವಿನಿಯೋಗವಾಗಿರೆ
ಅರ್ಪಿಸುವರು ಲಿಂಗಕ್ಕೆ ಬೋನವನ್
ಶಿವಯೋಗಿನಿ ಸಂತೃಪ್ತೇ ತೃಪ್ತೋ
ಭವತಿಶಂಕರಃ....ಎಂಬ ಮಂತ್ರದೊಡನೆ
ಬರಿ ಕೂಗಿನ ಮೊತ್ತಮಲ್ತಿದು
ಕಾಯಕದ ಕಲ್ಪನೆಯ ಸಗ್ಗಕ್ಕೊಯ್ವ
ಓಂಕಾರತೇರ್ಗಣಾ !
ಸ್ವಾರ್ಥಮಲ್ತೀ "ಶ್ರೀ" ಸಾಹಸಂ
ಪುರುಷಾರ್ಥಮದೊಂದು
ಗಂತವ್ಯಂ ಮಹಾ ಮಣಿಹಕ್ಕೆ.
ಬಣ್ಣನೆಯ ನುಡಿಯಲ್ತು
ಮೇಣತ್ಯುತ್ಸಾಹ ಜಲ್ಪಮೂಮಲ್ತು
ಕಣ್ ಕಂಡದ್ಭುತ ದರ್ಶನಂ ಕಣಾ !

# ಸಂಸಾರ ಸಾಗರ

—ಪ. ರಾಮಕೃಷ್ಣ ಶಾಸ್ತ್ರಿ

ಸಂಸಾರವೆಂಬುದು ಸಾಗರವೇನೊಹೌದು. ಆದರೆ ಅದು ಕೇವಲ ದುಃಖಸಾಗರವಲ್ಲ. ಆನಂದಸಾಗರವೂ ಹೌದು. ಅದನ್ನು ಹರನೆಂಬ ಹರಿಗೋಲಿನಿಂದ ದಾಟಬೇಕು–ಎನ್ನುತ್ತದೆ ಜನಪದ ಸಾಹಿತ್ಯ. ಅದನ್ನಿಲ್ಲಿ ಮಾನ್ಯ ಲೇಖಕರು ರಮ್ಯವಾಗಿ ಚಿತ್ರಿಸಿದ್ದಾರೆ.

—ಸಂ.



'ಸಂಸಾರವೆಂಬುದು ಸಾಗರ ಹೊಳೆಯಮ್ಮ! ಈಸ ಬಲ್ಲವನಿಗೆ ಎದೆಯುದ್ಧ-ಶಂಭೂವೆ ಓದಬಲ್ಲವಗೆ ಕೈಲಾಸ' – ಸಂಸಾರ ಸಾಗರಂ ಘೋರಂ ಎಂಬುದು ಆರ್ಯೋಕ್ತಿ. ನಾವೇಕೆ ಹುಟ್ಟಿದ್ದೇವೆ, ಎಲ್ಲಿಂದ ಬಂದಿದ್ದೇವೆ, ಇನ್ನು ಹೋಗುವುದು ಎಲ್ಲಿಗೆ ಎಂಬುದೆಲ್ಲವೂ ಅನಾದಿಯಿಂದಲೂ ನಾವು ಪ್ರಶ್ನಿಸಿ, ಮಥಿಸಿದರೂ ಉತ್ತರ ಲಭಿಸಿರದ ಸಮಸ್ಯೆಗಳು. ಆದರೂ ಜನಪದ ಗೀತೆಗಳಲ್ಲಿರುವ ಸಂಸಾರ - ಸಾಗರದ ಚಿತ್ರಣ ಭಕ್ತಿ ಪೂರಿತವಾದುದು.

ಸಂಸಾರ ದಂಡುಗ ಹಿಂಗದೊ ಶಿವರಾಯ
ಹಿಂಗಲಿಕೆ ಶರಣರ ಹಾದಿ – ಹಿಡಿಕೊಂಡು
ಗೆದಿಬೇಕು ಇದ್ದು ಸಂಸಾರ.

ಹುಟ್ಟು, ಸಾವು, ಭೋಗ ಕಾಮಾದಿ ವಿಶೇಷಗಳಿಂದಲೂ ವಿಷಯ ವಾಸನೆಗಳಿಂದಲೂ ತುಂಬಿ ಜಂಜಡವಾಗಿರುವ ಸಂಸಾರವನ್ನು ಗೆಲ್ಲಲು ಶರಣರ ಆದರ್ಶವೇ ದಾರಿದೀಪ. ಸಂಸಾರವೆಂಬುದು ಪಾಪದ ಹೊಳೆ. 'ಹೊತ್ತಿನಲ್ಲಿ ಎದ್ದು ಯಾರ್ಯಾರ ನೆನೆಯಲಿ ಕಲ್ಲು ಕಾವೇರಿ ಕಪಿನಿಯ - ನೆನೆದರೆ' ಈ ಅಂಟಿದ ಪಾಪ ಪರಿಹಾರ. ಸಂಸಾರದಲ್ಲಿ ಜಾಣನೇ ಜ್ಞಾನಿ. ಅವನಿಗೆ ಕಾಯಕವೇ ಕೈಲಾಸ 'ಆಕಾಶದ್ಧರಿಗೋಲು ಭೂಮಿ ತೂಕದ ಕುಂಟೆ ಎಳೆಯುವುದು ನೇಗಿಲೆರಡೆತ್ತು - ಕಟ್ಟಿಕೊಂಡು ಜಾಣ ಉಳುವನೆ ಬದುಕನ್ನು ಇಂಥ ಜಾಣ ಸಂಸಾರ ಸುಲಭ. ಸಂಸಾರಿಯಾಗಿದ್ದವನ ಕರ್ತವ್ಯವೇನು ?

ತನ್ನಂತೆ ನೋಡಿದರೆ ಅನ್ನ ಭೇದವಿಲ್ಲ
ಕನ್ನ ಹೊಟ್ಟೆಯ ಶಿಶುವಂತೆ ನೋಡಿದರೆ
ಕಣ್ಣ ಮುಂದಿಹುದು ಕೈಲಾಸ.

'ತನ್ನಂತೆ ಪರರ ಬಗೆದೊಡೆ ಕೈಲಾಸ ಬಿನ್ನಣವಕ್ಕು' ಎಂಬ ಸರ್ವಜ್ಞಕವಿಯಾಡಿದ ನುಡಿಯ ಮಥಿತಾರ್ಥ ಈ ಗೀತೆಯಲ್ಲಿ ಮೂಡಿದೆ. "ಶಿವಕೊಟ್ಟ ಕಾಲಕ್ಕೆ ಧಾನ್ಯವ ಬೆಳೆದರೆ ದಾನ ಧರ್ಮದ ಕೈಯ ಮರೆಯದಾರು – ಮೂರ್ಖನಾಗದಿರು" ಎಂದು ಅದು ಎಚ್ಚರಿಸಿದೆ. ದಾಸರು ಕೇಳಿಲ್ಲವೆ ? 'ಹರಿ ಕೊಟ್ಟ ಕಾಲಕ್ಕೆ ಕೊಡಲಿಲ್ಲ ಉಣಲಿಲ್ಲ, ಹರಿ ಕೊಡದ ಕಾಲಕ್ಕೆ ಬಾಯ್ಬಿಡುವೆಯಲ್ಲೋ ಪ್ರಾಣಿ' ತನ್ನಲ್ಲಿದಾಗ ಎರಡೂ ಕೈ ತುಂಬ ದಾನ ಮಾಡಬೇಕು "ನೆತ್ತಿ ತೋರಿಸಿದವನಿಗೆ ಎಣ್ಣೇಸೋಟು, ಹೊಟ್ಟೆ ತೋರಿಸಿದವನಿಗೆ ಅನ್ನ ಕೂಡು, ಮೈ ತೋರಿಸಿದವನಿಗೆ ಬಟ್ಟೆ ಕೊಡು' ಎನ್ನುತ್ತಾರೆ ಅನುಭವಿಕರು. ಬರೇ ಕೊಟ್ಟರೆ ಸಾಕೆ ? "ಕೊಟ್ಟು ಕುದಿಯಲು ಬೇಡ, ಇಟ್ಟು ಹಂಗಿಸಬೇಡ, ಇಷ್ಟುಂಡರೆಂದು ಅನಬೇಡ– ಈ ಮೂರು ಮುಟ್ಯಾವೆ ಶಿವನ ಸದರೀಗ" ಈ ಮೂರು ಶಿವನಿಗೆ ಪ್ರಿಯವಲ್ಲ. ಡಂಭಾಚಾರಕ್ಕಾಗಿ ಹೆರವರಿಗೆ ಕೊಟ್ಟು ಕೊನೆಗೆ ಹೊಟ್ಟೆಯೊಳಗೇ ತಳಮಳಿ-

ಸುವ ಪ್ರವೃತ್ತಿ, ಅಷ್ಟು ಕೊಟ್ಟ ನಿನಗೆ ಎಂದು ಹಂಗಿಸುವ ನೀಚತನ, ಅಬ್ಬಾ! ಅವನು ಎಂಥ ಬಕಾಸುರ-ಎಷ್ಟೊಂದು ಉಂಡ ಎಂದು ಗೋಳಿಡುವ ಹಾಳು ಬುದ್ಧಿ ಕೊಟ್ಟದಾನವನ್ನು ನಿಷ್ಫಲಗೊಳಿಸುತ್ತವೆ. ಕಾಯಾ, ವಾಚಾ, ಮನಸಾ ನೀಡುವ ಕೊಡುಗೆಯೇ ಶಿವನ ಒಲುಮೆಗೆ ಸಂಸಾರದಲ್ಲಿ ಸಾಧಕ.

ಹಾಡಬೇಕು ಹರ ಎಂದು ಬೇಡಬೇಕು ಶಿವ ಎಂದು
ಪಾಲಿಸಬೇಕು ಮನುಜರು- ಮಾಡಿದ ಬದುಕ
ತಾವುಂಡು ದಾನ ಕೊಡಬೇಕು.

ಯಾವ ಸಿರಿ ಸೊಬಗು ಗಳಿಸಲು ಶಿವನಾಮಸ್ಮರಣೆಯ ಮಹಿಮೆಯೇ ಆಧಾರ. ಆದರೆ ಹೀಗೆ ಸಿರಿ ಸಂಗ್ರಹಿಸಿಟ್ಟರಾಗಲಿಲ್ಲ. ತಾನೂ ಉಣಬೇಕು. ಹತ್ತು ಹಲವರಿಗೆ ದಾನ ಮಾಡಬೇಕು. 'ಮಂಚ ಬಾರದು, ಮಡದಿ ಬಾರಳು, ಕಂಚುಕನ್ನಡಿ ಬಾರದು, ವಂಚನೆಯ ದ್ರವ್ಯಬಾರದು' ಪರಲೋಕಕ್ಕೆ ಸಂಗಾತಿಯಾಗಿ ಬರುವುದು ಪಾಪ-ಪುಣ್ಯಗಳು ಮಾತ್ರ ಬದುಕು ಅಶಾಶ್ವತ. ಆಯುಷ್ಯದೋಲೆಯ ಆರ್‍ಕೊಟ್ಟರೆನಗ್ದೇಳು ನಾರಾಯಣ ಕೊಟ್ಟ ಶಿವಕೊಟ್ಟ-ಓಲೆಯು ಯಾರಿಗೂ ಓದಲು ತಿಳಿಯದು.

ಮರ್ತ್ಯಕ್ಕೆ ಹುಟ್ಟಿ ಬಂದು ಶರ್ತ ಮಾಡಿದೆ ಶಿವಗೆ
ವ್ಯರ್ಥ ಮಾಡಬೇಡ ನನ ಜನ್ಮ- ಕೈಲಾಸದೊಡೆಯ
ಕರುಣ ಮಾಡೆನಗೆ ನಿನ ಸೇವೆ.

'ಲೋಕದಲೀ ಜೀವ ಜೋಕೆಯಿಂದಿರಬೇಕು, ಕಾಕು ಬುದ್ಧಿಗಳು ಸ್ಥಿರವಲ್ಲ- ಈ ಬದುಕ ನೂಕಿರುವೆ ಹರಿವ ಜಲದೊಳಗೆ' ಘೋರವಾದ ಸಂಸಾರವೆಂಬ ಕಾರಡವಿಯಲ್ಲಿ ಉದಿಸಿದೆ ಜೀವ. ಉಣ್ಣುವುದು, ತಿನ್ನುವುದು, ಮಲಗುವುದರಲ್ಲೇ ಬದುಕಿನ ಸಾರ್ಥಕ್ಯ ಕಾಣಬಾರದು. ಐಹಿಕ ಭೋಗಲಾಲಸೆಯಲ್ಲಿ ತಲ್ಲೀನವಾದ ಈ ದೇಹ ಆ ಕ್ಷಣಿಕ ತೃಪ್ತಿಗೆ ಬಲಿಯಾದರೆ ಪರಗತಿಯ ಮೋಕ್ಷ ಸಾಧನವು ಇಲ್ಲ. ಅವನ ಬಾಳು ನಿರರ್ಥಕ. ಸಂಸಾರ ಕೂಪದಲ್ಲಿ ಮುಳುಗಿದ್ದರೆ ಅದರಿಂದ ಕೈ ಹಿಡಿದೆತ್ತಬೇಕಾದವ ಭಗವಂತ. ಕರೆದಲ್ಲಿಗೆ ಬರಬಲ್ಲ, ಕಲ್ಲೊಳಗಿರುವ ಕಪ್ಪೆಗೆ ಅಲ್ಲೇ ಉದಕವೀಯಬಲ್ಲ ಆ ಮಹಿಮಾವಂತನ ಕೃಪೆಯಿಲ್ಲದಿದ್ದರೆ 'ತೃಣಮಪಿ ನ ಚಲತಿ ತೇನ ವಿನಾ' ಅವನ ಕೃಪೆಯಿದ್ದರೆ ಮೂಕನು ಮಾತನಾಡಿಯಾನು. ಹೆಳವನು ಬೆಟ್ಟವನ್ನೇರಿಯಾನು. ಶಿವಸೇವೆಯೆಂಬುದು ಅದು ಸೇಯಲ್ಲ, ಸಾಧನೆ. ಬದುಕಿನ ಅಡಿಪಾಯ. ಮಾನಸಿಕ ಶಾಂತಿಗೆ ಆಧಾರ.

ಹರ ಹರ ಎಂದು ಹರಿವ ಗಂಗೆಯ ಮಿಂದೆ
ಶಿವ ಶಿವ ಎಂದು ಮುಳುಗಿದೆ- ಸಂಸಾರದ
ಹೊರೆ ಇಳಿದು ಪಾಪ ತೊಳೆದೀತು.

"ಕಣ್ಣು ಕಾಣದು ಕಷ್ಟ, ಕಿವಿಯು ಕೇಳುದು ಕಷ್ಟ- ಯಾವುದಕು ಕಷ್ಟ ಬಡತನ-ಬಂದರೆ ಕೂಡೆಂಬರು ಹೊಳೆಯ ತುದಿಯಲ್ಲಿ" ಇದೊಂದು ವ್ಯಥೆಯ ಹಾಡು ಆದರೆ ಇಲ್ಲಿ ಹೇಳಿರುವುದು ಹಣದ ದಾರಿದ್ರ್ಯವಲ್ಲ, ಭಕ್ತಿಯ ಬಡತನ. ದೇವರ ಮೇಲಿನ ಭಕ್ತಿಯೆನ್ನುವ ಸಂಪತ್ತನ್ನು ಕಳೆದುಕೊಂಡು ಸಂಸಾರ ಶರಧಿಗಿಳಿದರೆ ಅವನು ಕಿವುಡನಾಗಿರುತ್ತಾನೆ, ಅವನ ಪಾಲಿಗೆ ಜಗತ್ತು ಅಂಧಕಾರಮಯವಾಗುತ್ತದೆ. ಆಸರೆಯ ಊರುಗೋಲಿಲ್ಲದ ಅವನನ್ನು ಯಾರೂ ದಾಟಿಸುವುದಿಲ್ಲ. ಹರನೆಂಬ ಹರಿಗೊಲ ಗಳಿಸದಿದ್ದರೆ ಅವನೆಲ್ಲಿಯ ಶರಧಿ ದಾಟಿಯಾನು? ಅವನೊಲವೆಯಿದ್ದರೆ ನಡು ನೀರಲ್ಲಿ ಮುಳುಗಿದರೂ ಸಂಸಾರದ ಹೊರೆ ಪರಿಹಾರವಾಗಿ, ಪಾಪದ ಕೊಳೆ ಹರಿದು ಬಿಡುತ್ತದೆ. ಅಣೋರಣೀಯನೂ ಮಹತೋ ಮಹೀಯನೂ ಆದ ಅವನ ದಯೆ ಸತ್ಸಂಗದಿಂದಲಭಿಸುತ್ತದೆ. ಹೀನ ಜನರ ಒಡನಾಟದಿಂದ ಯಾವ ಸದ್ಗತಿಯೂ ಲಭಿಸಲಾರದು.

ಉತ್ತಮರ ಗೆಳೆತನ ಪುತ್ಥಳಿ ಬಂಗಾರ
ಮತ್ತೆ ಹೀನರ ಗೆಳೆತನ ಮಾಡಿದರೆ
ಹಿತ್ತಾಳೆಗಿಂತ ಬಲು ಹೀನ.

ಸಜ್ಜನರು ಅವನನ್ನು ಪುಟಕ್ಕಿಟ್ಟ ಚಿನ್ನದಂತೆ ಪರಿಶುದ್ಧಗೊಳಿಸಿ ದೇವರ ಎಡೆಗೊಯ್ಯುತ್ತಾರೆ. ಅನವರತವೂ,'ವೆಂಕಟರಮಣನೆ ಎಳೆಯ ಗೋವಿಂದನೆ, ಭಕುತರಿಗೊಲಿಯೋ ಸುಗುಣನೆ- ತಿಮ್ಮಪ್ಪ ಸೋಲಿಸಬೇಡ ಗೆಲಿಸಯ್ಯ' ಎಂದು ಅನನ್ಯ ದೇವರನ್ನು ನಂಬಿದರೆ ಸಂಸಾರದ ಜಂಜಡ ಮಾಯವಾಗುತ್ತದೆ. ಕಷ್ಟ ಕಾರ್ಪಣ್ಯಗಳು ಮಾಯವಾಗುತ್ತವೆ. ಅಂಧಕಾರ ಮಯವಾದ ಬದುಕಿನಲ್ಲಿ ಜ್ಞಾನದ ಬೆಳಕು ಕೋರೈಸುತ್ತದೆ.

(26 ನೇ ಪುಟ ನೋಡಿ)

# ತಾರಾಮಂಡಲದ ವಿಸ್ಮಯಗಳು

—ಕ್ಯಾಪ್ಟನ್ ಎಂ ಜಿ. ಕೆ. ಮೂರ್ತಿ.

ಇತರೇ ವಿಜ್ಞಾನ ಶಾಖೆಗಳಲ್ಲಿ ನಮ್ಮ ವಿಜ್ಞಾನದ ಪರಿಧಿ ವಿಶಾಲವಾದಂತೆ, ನಮ್ಮ ವಿಶ್ವದ ಬಗ್ಗೆಯ ಅರಿವೂ ಕೂಡ ಖಗೋಳ ವಿಜ್ಞಾನ ಸಾಧನೆಯಿಂದ ವಿಶಾಲಗೊಂಡಿದೆ. ವಿಶ್ವದ ಬಗ್ಗೆ ಖಗೋಳ ಶಾಸ್ತ್ರ ಒದಗಿಸಿರುವ ಮಾಹಿತಿ ಆಶ್ಚರ್ಯಕರ. ಪ್ರಸ್ತುತ ಲೇಖನದಲ್ಲಿ, ಮಾನ್ಯ ಲೇಖಕರು, ಇಂತಹ ಜ್ಞಾನ ಸಾಧನೆಗೆ ಸಹಾಯಕವಾದ ದೂರದರ್ಶಕದಿಂದ ಹಿಡಿದು, ಸೂರ್ಯ, ನಕ್ಷತ್ರ ಪುಂಜ, ಕ್ಷೀರಪಥ ಇಂತಹ ವಿಷಯಗಳ ಬಗ್ಗೆ ಸಾಪೇಕ್ಷವಾಗಿ ಹಾಗೂ ಸಂಕ್ಷಿಪ್ತವಾಗಿ ವಿವರಿಸಿ ನಮ್ಮ ಓದುಗರಿಗೆ ಉಪಕಾರ ಮಾಡಿದ್ದಾರೆ.

ಆಧುನಿಕ ವಿಜ್ಞಾನ ಹಾಗೂ ಕಲಾ ಕೌಶಲ್ಯವು ಅತ್ಯಾಶ್ಚರ್ಯ ಸಲಕರಣೆಗಳನ್ನು ಕಂಡುಹಿಡಿದು ಖಗೋಳ ವಿದ್ಯೆಯಲ್ಲಿ ಕ್ರಾಂತಿಯನ್ನುಂಟುಮಾಡಿದೆ. ಬಹು ಪ್ರಬಲವಾದ ದೂರದರ್ಶಕ ಯಂತ್ರಗಳೂ, ಶೀಘ್ರವೇದಿ ಫೋಟೋ ಪ್ಲೇಟ್‌ಗಳೂ ತಾರಾಮಂಡಲದಲ್ಲಿ ಹೊಸ ಹೊಸ ಆಶ್ಚರ್ಯಗಳನ್ನು ಪತ್ತೆ ಮಾಡಿವೆ.

ಅಮೇರಿಕದ ಮೌಂಟ್‌ವಿಲ್ಸನ್ ಎಂಬ ನಕ್ಷತ್ರ ಶಾಲೆಯಲ್ಲಿರುವ 100 ಅಂಗುಲ ವ್ಯಾಸದ ಬೃಹದಾಕಾರದ ದೂರದರ್ಶಕವು 2400 ಮೈಲಿ ಆಚೆ ಇರುವ ಮೋಂಬತ್ತಿಯ ದೀಪವನ್ನು ನೋಡಬಲ್ಲದು. 9600 ಮೈಲು ದೂರದ ಮೇಣದ ಬತ್ತಿಯ ದೀಪವನ್ನು ಫೋಟೋ ತೆಗೆಯಬಲ್ಲದು. ಇದರ ನೆರವಿನಿಂದ ಖಗೋಳ ಶಾಸ್ತ್ರಜ್ಞರು "36" ಎಂಬ ಸಂಖ್ಯೆಯ ಮುಂದೆ 20 ಸೊನ್ನೆಗಳನ್ನು ಇಟ್ಟರೆ ಆಗುವ ಸಂಖ್ಯೆಯಷ್ಟು ಆಗುವ ಮೈಲು ದೂರದ ವರೆಗೆ ಗಗನ ವೀಕ್ಷಣೆ ನಡೆಸಿ, ಮಾನವನು ಪೃಥ್ವಿಗೆ ಬಂದದ್ದಕ್ಕಿಂತಲೂ ಹಿಂದಿನ ಕಾಲವನ್ನು ಮುಟ್ಟಿದ್ದಾರೆ.

ಅಮೇರಿಕದ ಕ್ಯಾಲಿಫೋರ್ನಿಯದಲ್ಲಿರುವ ಮೌಂಟ್‌ಪಾಲೊಮಾರ್ ಎಂಬ ವೇಧ ಶಾಲೆಯಲ್ಲಿರುವ 200 ಅಂಗುಲ ವ್ಯಾಸದ 3½ ಕೋಟಿ ರೂಪಾಯಿ ಬೆಲೆ ಬಾಳುವ ದೂರದರ್ಶಕವು ಎಷ್ಟು ಅಗಾಧವಾಗಿದೆಯೆಂದರೆ ಅದನ್ನಿಟ್ಟಿರುವ ಕಟ್ಟಡದ ಗುಮ್ಮಟವು 137 ಎತ್ತರವಿದೆ. ಅದನ್ನು ಮುಗಿಸಲು 22 ವರ್ಷಕಾಲ ಬಹು ಎಚ್ಚರಿಕೆಯ ಪ್ರಯಾಸ ಪಡಬೇಕಾಯಿತು. 15 ಟನ್ ಭಾರವೂ, 30,000 ಚದುರಂಗುಲದ ಸಾಣೆ ಕನ್ನಡಿಯನ್ನು ಹಿಡಿದು ರೇಖಾಕೃತಿಗೆ ತಂದು ಮಿರುಗಿಸಲು ಬಹು ಚಾತುರ್ಯವೂ, ಪ್ರವೀಣತೆಯೂ ಪ್ರಯೋಗಿಸಲ್ಪಡಲಾಯಿತು. ಚಪ್ಪಟೆಯಾಗಿದ್ದ ಮೂಲಗಾಜಿನ ಅಸಿಗಲ್ಲನ್ನು ಬೇಕಾಗಿದ್ದ ಗೋಲಾಕಾರಕ್ಕೆ ರೂಪಿಸಲು ಮೊದಲನೇ ಸಾರಿತಿಕ್ಕಿ ತೆಗೆದ ಗಾಜಿನ ತೂಕವೇ ಐದು ಟನ್ ಆಯಿತು. 1/10,000 ಅಂಗುಲಕ್ಕಿಂತಲೂ ಹೆಚ್ಚು ವ್ಯತ್ಯಾಸ ಬರಕೂಡದ್ದರಿಂದ, ಹಸ್ತಕೌಶಲವು ಬಹು ಸಮಂಜಸವಾಗ ಬೇಕಾಗಿತ್ತು. ಈ ದೂರದರ್ಶಕವು ಎಷ್ಟು ಪ್ರಚಂಡವಾಗಿದೆಯೆಂದರೆ, ಬರೀ ಕಣ್ಣಿಗೆ ಮಂಕಾಗಿ ಕಾಣುವ ನಕ್ಷತ್ರವು ಏಳು ಲಕ್ಷದಷ್ಟು ಹೆಚ್ಚಾಗಿ ಪ್ರಕಾಶಿಸುತ್ತದೆ. ಮೋಂಬತ್ತಿಯ ದೀಪದಷ್ಟು ಮಂದವಾಗಿ 40 ಸಾವಿರ ಮೈಲು ದೂರದಲ್ಲಿರುವ ವಸ್ತುವನ್ನು ಈ ದೂರದರ್ಶಕದಿಂದ ಫೋಟೊ ತೆಗೆಯಲು ಸಾಧ್ಯ.

ಸೂರ್ಯನ ಗಾತ್ರವು 1,306,000 ಪೃಥ್ವಿಗಳ ಗಾತ್ರಕ್ಕೆ ಸಮಾನ. ಸೂರ್ಯನಲ್ಲಿರುವ ವಸ್ತುವಿನ ಪರಿಮಾಣ ಐದು ಲಕ್ಷ ಪೃಥ್ವಿಗಳದ್ದಷ್ಟಾಗುತ್ತದೆ. ಸೂರ್ಯನ ವ್ಯಾಸ ಪೃಥ್ವಿಯದಕ್ಕಿಂತ 109 ರಷ್ಟು ಹೆಚ್ಚು. ಭೂಮಂಡಲವು ಕೋಟ್ಯನುಕೋಟಿ ವರ್ಷಗಳ

ಹಿಂದೆ ಸೂರ್ಯನಿಂದ ವಿಯೋಗವಾಗಿ ಉರುಳಿ ಬಿದ್ದ ವಸ್ತು. ಸೂರ್ಯನಿಂದ ಹೊರಟು ಒಂದು ಲಕ್ಷ ಮೈಲು ಮೇಲೆ ಹಾರುವ ಅಗ್ನಿ ಜ್ವಾಲೆಗಳು ಎರಡು ಕೋಟಿ ಡಿಗ್ರಿ ಶಾಖವನ್ನುಂಟುಮಾಡುತ್ತವೆ. ಅವು ದೂರದರ್ಶಕ ದಿಂದ ಫೋಟೊ ತೆಗೆಯಲ್ಪಟ್ಟವೆ.

ಪೃಥ್ವಿಯ ವ್ಯಾಸ 7913 ಮೈಲಿಗಳು. 2160 ಮೈಲಿ ವ್ಯಾಸದ ಚಂದ್ರನು ಭೂಮಿಯಿಂದ 240,000 ಮೈಲಿ ದೂರದಲ್ಲಿದೆ. ಪೃಥ್ವಿಯನ್ನು ಸೂರ್ಯಮಂಡಲದ ಕೇಂದ್ರದಲ್ಲಿಟ್ಟರೆ, ಪೃಥ್ವಿಯೂ ಅದನ್ನು ಸುತ್ತುಹಾಕುವ ಚಂದ್ರನೂ ಸೂರ್ಯನ ಅರ್ಧಕ್ಕೆ ಬರುತ್ತವೆ.

ಕೋಟ್ಯನುಕೋಟಿ ನಕ್ಷತ್ರಗಳಲ್ಲಿ ಸೂರ್ಯನೂ ಒಂದು ನಕ್ಷತ್ರ. ಸೂರ್ಯನಿಗಿಂತಲೂ ಬಹು ದೊಡ್ಡ ನಕ್ಷತ್ರಗಳಿವೆ. ಆದ್ರಾ ನಕ್ಷತ್ರವನ್ನು (Betal-guese) ಸೂರ್ಯನಿಗೆ ಹೋಲಿಸಿದರೆ, ರಾಕ್ಷಸನನ್ನು ವಾಮನನಿಗೆ ಹೋಲಿಸಿದಂತಾಗುತ್ತದೆ. ಆದ್ರಾ ನಕ್ಷತ್ರದ ವ್ಯಾಸ 35 ಕೋಟಿ ಮೈಲಿ. ಅದರ ಕೇಂದ್ರದಲ್ಲಿ ಸೂರ್ಯನನ್ನಿಟ್ಟರೆ, ಸೂರ್ಯ ಒಂದು ಚುಕ್ಕಿಯಂತೆ ಕಾಣುತ್ತದೆ. ಸೂರ್ಯನೂ, ಸೂರ್ಯನನ್ನು ಸುತ್ತು ಹಾಕುವ ಬುಧ, ಶುಕ್ರ ಮತ್ತು 930 ಲಕ್ಷ ಮೈಲಿ ದೂರ ದಲ್ಲಿರುವ ಪೃಥ್ವಿಯೂ ಆದ್ರಾ ನಕ್ಷತ್ರದ ಕಾಯದೊಳಗೇ ಅಡಗಿರುತ್ತವೆ.

ಆದ್ರಾ ನಕ್ಷತ್ರಕ್ಕಿಂತಲೂ ದೊಡ್ಡ ನಕ್ಷತ್ರಗಳೂ ಇವೆ. "ಆಲ್ಫಾಹರ್‌ಕ್ಯುಲಿಸ್" ಎಂಬನಕ್ಷತ್ರದ ವ್ಯಾಸ ಎರಡು ಬಿಲಿಯನ್ ಮತ್ತು 40 ಕೊಟಿ ಮೈಲಿ. ಸೂರ್ಯನನ್ನೂ, ಸೂರ್ಯನಿಂದ 9.3 ಕೋಟಿ ಮೈಲಿ ದೂರದಲ್ಲಿರುವ ಪೃಥ್ವಿಯನ್ನೂ ಆ ನಕ್ಷತ್ರದ ಮಧ್ಯ ರೇಖೆಯ ಮೇಲೆ 25 ಸಾರಿ ಸಾಲುಸಾಲಾಗಿಡಲು ಎಡೆಯಿದೆ.

ನಕ್ಷತ್ರಗಳು ವಾಸ್ತವವಾಗಿ ಧಗಧಗಿಸಿ ಉರಿಯುತ್ತಿರುವ ಅನಿಲಗಳ ಮಹಾ ಗೋಲಗಳು. ಈ ಗೋಲ ಗಳಲ್ಲಿ ಪರಮಾಣು ಶಕ್ತಿಯನ್ನು ಉತ್ಪತ್ತಿಮಾಡುವ ಪ್ರವೃತ್ತಿಗಳಿವೆ. ಜಲಜನಕ ಅನಿಲದ ಪರಮಾಣುಗಳು ಹೀಲಿಯಂ (helium) ಅನಿಲದ ಪರಮಾಣುಗಳಾಗಿ ರೂಪಾಂತರವಾಗುವುದರಿಂದ, ಮೂಲ ಪರಮಾಣುಗಳಲ್ಲಡಗಿದ್ದ ಸತ್ವ ಶಕ್ತಿಯು ಬಿಡುಗಡೆಯಾಗಿ ಅತ್ಯಧಿಕ ಶಾಖವು ಉತ್ಪತ್ತಿಯಾಗುತ್ತದೆ. ಹೈಡ್ರೋಜನ್ ಬಾಂಬು ಕೆಲಸ ಮಾಡುವುದು ಹೀಗೆಯೇ. ಅನೇಕ ನಕ್ಷತ್ರಗಳು ಸೂರ್ಯ ನಿಗಿಂತ ಹೆಚ್ಚು ಕಾಂತಿಯುತವಾಗಿವೆ.

ಕೆಲವು ನಕ್ಷತ್ರಗಳು ಇತರ ನಕ್ಷತ್ರಗಳಿಗಿಂತ ಹೆಚ್ಚು ಬಿಸಿಯಾಗಿವೆ. ಅತ್ಯಂತ ಬಿಸಿಯಾಗಿರುವವು ನೀಲಿ ಬಣ್ಣದವು (36.000° F) ಬಿಳಿಯ ಬಣ್ಣದವು 20,000° F ಗಿಂತ ಹೆಚ್ಚು ಹಳದಿ ಬಣ್ಣದವು 11,000° F ಗಿಂತ ಹೆಚ್ಚು ಕೆಂಪು ಬಣ್ಣದವು 7500° F ಗಿಂತ ಹೆಚ್ಚು.

ಸೂರ್ಯ ಭೂಮಿಯಿಂದ ಎಷ್ಟು ಅಗಾಧ ದೂರದಲ್ಲಿದೆಯೆಂದರೆ, ಗಂಟೆಗೆ 60 ಮೈಲಿ ವೇಗದಲ್ಲಿ ಓಡುವ ಹಬೆಗಾಡಿಗೆ ಸೂರ್ಯನನ್ನು ತಲುಪಲು 125 ವರ್ಷಗಳು ಹಿಡಿಯುತ್ತವೆ. ಗಂಟೆಗೆ 150 ಮೈಲಿ ವೇಗದ ಆಕಾಶ ವಿಮಾನಕ್ಕೆ 71 ವರ್ಷಗಳು ಬೇಕಾ ಗುತ್ತವೆ. ಸೂರ್ಯನಿಗೆ ಅತ್ಯಂತ ಸಮೀಪದಲ್ಲಿರುವ "ಆಲ್ಫಾ ಸೆಂಟಾರಿ" ಎಂಬ ನಕ್ಷತ್ರದ ದೂರವು ಭೂಮಿ ಯಿಂದ ಸೂರ್ಯನದಕ್ಕಿಂತಲೂ 26,000 ದಷ್ಟು ಹೆಚ್ಚು —2½ ಕೋಟಿ ಕೋಟಿ ಮೈಲು ದೂರ, ಗಂಟೆಗೆ 700 ಮೈಲು ವೇಗದಲ್ಲಿ ಹಾರಿಹೋಗುವ ಜೆಟ್‌ವಿಮಾನಕ್ಕೆ ಅಲ್ಲಿ ಮುಟ್ಟಲು ಒಂದು ಲಕ್ಷ ವರ್ಷ ಗಳು ಬೇಕು.

ನಕ್ಷತ್ರಗಳು ಮಾನವನ ಕಲ್ಪನೆಗೆ ನಿಲುಕದಷ್ಟು ದೂರದಲ್ಲಿವೆ. ಜ್ಯೋತಿಸ್ಕಿರಣದ ವೇಗವು ಒಂದು ನಿಮಿಷಕ್ಕೆ 11,000,000 ಮೈಲಿ. ಒಂದು ಸೆಕೆಂಡಿ ನಲ್ಲಿ ಅದು ಭೂಮಿಯ ಸುತ್ತಲು 7½ ಸಾರಿ ಹೋಗ ಬಲ್ಲದು. ನಕ್ಷತ್ರಗಳಿರುವ ದೂರಗಳು ಎಷ್ಟು ಅಗಾಧ ವೆಂದರೆ, ಅವುಗಳನ್ನು ಜ್ಯೋತಿರ್ವರ್ಷಗಳಲ್ಲಿ (Light year) ಅಳೆಯಬೇಕು. ಒಂದು ಜ್ಯೋತಿರ್ವರ್ಷವೆಂದರೆ, ಒಂದು ಕಿರಣವು ಒಂದು ವರ್ಷದಲ್ಲಿ ಪ್ರಯಾಣ ಮಾಡುವದೂರ—ಆರು ಲಕ್ಷ ಕೋಟಿ ಮೈಲಿ.

ಸೂರ್ಯನಿಂದ ಹೊರಡುವ ಕಿರಣವು ಭೂಮಿ

ಯನ್ನು 8.3 ನಿಮಿಷಗಳಲ್ಲಿ ತಲುಪುತ್ತದೆ. ಸೂರ್ಯನಿಗೆ ಅತ್ಯಂತ ಸಮೀಪದಲ್ಲಿರುವ ನಕ್ಷತ್ರದ ದೂರ ಭೂಮಿಯಿಂದ $4\frac{1}{3}$ ಜ್ಯೋತಿರ್ವರ್ಷ; ಎಂದರೆ, ಒಂದು ನಿಮಿಷಕ್ಕೆ 10,000,000 ಮೈಲಿ ವೇಗದಲ್ಲಿ ಪ್ರಯಾಣ ಮಾಡುತ್ತಾ ಹೋದರೆ, ನಾವು ಆ ನಕ್ಷತ್ರವನ್ನು ಸೇರಲು $4\frac{1}{3}$ ವರ್ಷಗಳು ಬೇಕು. ಸೂರ್ಯನ ಆಚೆ ಇರುವ ಮೂರನೆ ನಕ್ಷತ್ರಕ್ಕೂ, ಭೂಮಿಗೂ ಇರುವ ದೂರ "51" ರ ಮುಂದೆ 12 ಶೂನ್ಯಗಳನ್ನು ಹಾಕಿದರೆ ಆಗುವ ಸಂಖ್ಯೆಯಷ್ಟು ಮೈಲಿಗಳು. ಕೃತ್ತಿಕಾ ಮಂಡಲದ ನೀಹಾರಿಕೆಯು (the nebula in the pleiades) ಭೂಮಿಯಿಂದ 220 ಜ್ಯೋತಿರ್ವರ್ಷಗಳ ದೂರದಲ್ಲಿದೆ. ಅದರ ಅಡ್ಡಳತೆ 30 ಜೋತಿರ್ವರ್ಷಗಳು. ಪೃಥ್ವಿಯ ಗಾತ್ರವನ್ನು ಬಟಾಣಿಕಾಳಿನಷ್ಟು ಚಿಕ್ಕದಾಗಿ ತೋರಿಸಿ ಒಂದು ನಕ್ಷೆಯನ್ನು $3\frac{1}{3}$ ಮೈಲು ವ್ಯಾಸದ ವರ್ತುಲದ ಅಂಚಿನಲ್ಲಿರುತ್ತದೆ.

ಸೂರ್ಯನಿಗೆ ಅತ್ಯಂತ ಸಮೀಪದಲ್ಲಿರುವ "ಆಲ್ಫಾ ಸೆಂಟಾರಿ" ನಕ್ಷತ್ರವು ಆ ನಕ್ಷೆಯಲ್ಲಿ 7500 ಮೈಲು ದೂರದಲ್ಲಿರುತ್ತದೆ. ಕೃತ್ತಿಕಾ ಮಂಡಲದ ನೀಹಾರಿಕೆಯು ಸೂರ್ಯ, ಸೂರ್ಯನ ಸುತ್ತಲೂ ತಿರುಗುವ ಒಂಭತ್ತು ಗ್ರಹಗಳು ಮತ್ತು "ಆಲ್ಫಾ ಸೆಂಟಾರಿ" ನಕ್ಷತ್ರವನ್ನೂ ಅಲ್ಲದೆ ಇನ್ನೂ ಇತರ ನಕ್ಷತ್ರಗಳನ್ನೂ ಒಳಗೊಳ್ಳಬಹುದು.

ನಕ್ಷತ್ರಗಳು ಅಗಾಧವಾದ ಸಮುದಾಯಗಳಲ್ಲಿ ಜೊತೆಗೂಡಿವೆ. ಈ ಗುಂಪುಗಳಿಗೆ ನಕ್ಷತ್ರ ಪುಂಜಗಳೆಂದು (galaxies) ಹೆಸರು. ಅವುಗಳ ವಿಸ್ತೀರ್ಣವು ಭೂಮಂಡಲವಕ್ಕಿಂತಲೂ ಹೆಚ್ಚಾಗಿರುವುದರಿಂದ, ಅವುಗಳನ್ನು ದ್ವೀಪಜಗತ್ತುಗಳೆಂದು (Island universes) ಕರೆಯಬಹುದು. ಬರೀ ಕಣ್ಣಿಗೆ ಕಾಣುವ ಎಲ್ಲ ನಕ್ಷತ್ರಗಳೂ, ಸೌರವ್ಯೂಹವೂ ಒಂದು ಗುಂಪಿಗೆ ಸೇರಿಸಲ್ಪಟ್ಟಿವೆ. ಅಂಥ ಸಹಸ್ರಾರು ನಕ್ಷತ್ರಪುಂಜಗಳಿವೆ. ನಮ್ಮ ಬರೀ ಕಣ್ಣಿಗೆ ಕಾಣುವ ನಕ್ಷತ್ರಪುಂಜದ ಭಾಗಕ್ಕೆ ಕ್ಷೀರಪಥ (Milky way) ವೆಂದು ಹೆಸರು ಅದೊಂದರಲ್ಲೇ 400 ಕೋಟಿ ನಕ್ಷತ್ರಗಳಿವೆ; ಸುಮಾರು 3600 ಕೋಟಿ ಗ್ರಹಗಳಿವೆ. ಸೂರ್ಯಕಿರಣದ ವೇಗದಲ್ಲಿ ಹೋದರೂ ಅದನ್ನು ದಾಟಲು ಒಂದು ಲಕ್ಷ ವರ್ಷಗಳು ಹಿಡಿಯುತ್ತವೆ. ನಮ್ಮ ನಕ್ಷತ್ರ ಪುಂಜದ ವ್ಯಾಸ 120,000 ಜ್ಯೋತಿರ್ವರ್ಷಗಳೆಂದು ವಿಜ್ಞಾನಿಗಳು ಅಂದಾಜು ಮಾಡಿದ್ದಾರೆ, ಕ್ಷೀರಪಥವು ಇಡೀ ನಕ್ಷತ್ರ ಪುಂಜದ ನೂರನೇ ಒಂದು ಭಾಗ ಮಾತ್ರ, ಉಳಿದ ಭಾಗವು ಕಾಸ್ಮಿಕ್ ರೇಣು, ಧೂಳುಗಳಿಂದಲೂ, ಮಬ್ಬಾದ ಧೂಮಸ್ತೋಮಗಳಿಂದಲೂ, ಬಗೆ ಬಗೆ ಅನಿಲಗಳಿಂದಲೂ ಮುಚ್ಚಲ್ಪಟ್ಟಿವೆ. ನಕ್ಷತ್ರಗಳು ಈ ರೇಣುಗಳಿಂದ ಉತ್ಪತ್ತಿಯಾಗುತ್ತವೆ.

ಈ ನಕ್ಷತ್ರ ಪುಂಜವು ರಾಕ್ಷಸ ಗಾಡಿ ಚಕ್ರದಂತೆ ಗುರುತ್ವ ಶಕ್ತಿಯಿಂದ ನಿರ್ದಿಷ್ಟ ರೀತಿಯಲ್ಲಿ ತಿರುಗುತ್ತದೆ. ಆ ಕೇಂದ್ರದಿಂದ ಸೂರ್ಯನಿರುವ ದೂರ 30 ಸಾವಿರ ಜ್ಯೋತಿ ವರ್ಷಗಳು. ನಮ್ಮ ನಕ್ಷತ್ರ ಪುಂಜದ ಕೇಂದ್ರದ ಸುತ್ತಲೂ ಗಂಟೆಗೆ 10 ಲಕ್ಷ ಮೈಲಿ ವೇಗದಲ್ಲಿ ಹೋದರೂ ಒಂದು ಪ್ರದಕ್ಷಿಣೆಯನ್ನು ಮುಗಿಸಲು 20 ಕೋಟಿ ವರ್ಷಗಳು ಬೇಕು. ನಮ್ಮಿಂದ 50 ಕೋಟಿ ಜ್ಯೋತಿರ್ವರ್ಷದ ಅಂತರದಲ್ಲಿ ಲಕ್ಷೋಪಲಕ್ಷ ಇತರ ನಕ್ಷತ್ರಪುಂಜಗಳೂ, ಕೋಟಿ ಕೋಟಿ ಕ್ಷೀರಪಥಗಳೂ ಇವೆ. ನಮಗೆ ಅತ್ಯಂತ ಸಮೀಪದಲ್ಲಿರುವ ನೆರೆ ಜಗತ್ತೆಂದರೆ ದೇವಯಾನಿ ನಕ್ಷತ್ರ ಪುಂಜದಲ್ಲಿರುವ ಮಹಾನೀಹಾರಿಕೆ (Great Nebula in Andromeda). ಈ ಸಮೀಪದ ನೆರೆಯೆಂಬುದೇ ಎಂಟು ಲಕ್ಷ ಜ್ಯೋತಿರ್ವರ್ಷಗಳ ದೂರದಲ್ಲಿದೆ! ಈ ಕಾಲಪರಿಮಾಣವು ಶಿಲಾಯುಗಕ್ಕೂ (Stone Age) ಬಹು ಹಿಂದಿನದಾಯಿತು. ಇದರ ಆಚೆ ನೂರರಷ್ಟು ದೂರದಲ್ಲಿ ಆವರ್ತ ನೀಹಾರಿಕೆಗಳೂ (Spiral Nebulae), ಇತರ ಕೋಟ್ಯಂತರ ನೀಹಾರಿಕೆಗಳೂ ಹರಡಿಕೊಂಡಿವೆ. ಅವುಗಳೇ ಪ್ರತ್ಯೇಕ ಪ್ರತ್ಯೇಕ ನಕ್ಷತ್ರ ಪುಂಜಗಳಾಗಿ, ಬೇರೆ ಬೇರೆ ಜಗತ್ತುಗಳಾಗಿವೆ. ಪ್ರತಿಯೊಂದರಲ್ಲೂ ಸಾವಿರಾರು ಕೋಟಿ ನಕ್ಷತ್ರಗಳಿವೆ. ಈ ಜಗತ್ತುಗಳಲ್ಲಿ ಒಂದೊಂದಕ್ಕಿರುವ ಸರಾಸರಿ ದೂರ ಸುಮಾರು ಹತ್ತು ಲಕ್ಷ ಜ್ಯೋತಿರ್ವರ್ಷಗಳು.

ಪ್ರಾಕ್ಸಿಮಾ ಸೆಂಟಾರಿಯಲ್ಲಿ ವೀಕ್ಷಕನು ದೂರದರ್ಶಕದಿಂದ ಪೃಥ್ವಿಯನ್ನು ನೋಡಿದರೆ, ಪೃಥ್ವಿಯಿಂದ ನಾಲ್ಕು ವರ್ಷಗಳ ಹಿಂದೆ ಹೊರಟ ಕಿರಣವನ್ನು ಅವನು ಇವತ್ತು ನೋಡುವನು. ಧ್ರುವನಕ್ಷತ್ರ ಅಥವಾ ಸಪ್ತರ್ಷಿ ಮಂಡಲದಿಂದ ನೋಡುವವನು ಅಕ್ಬರ್ ಅಥವಾ ಹರ್ಷನ

ಕಾಲದ ದೃಶ್ಯಗಳನ್ನು ನೋಡುತ್ತಿರಬಹುದು. "ಮಹಾ ನೀಹಾರಿಕೆ" ಯು ಎಂಟು ಲಕ್ಷ ಜ್ಯೋತಿರ್ವರ್ಷಗಳಲ್ಲಿ ನಾಶವಾಗಿರಬಹುದು; ಆದರೂ ಅದು ನಮಗೆ ಕಾಣಿಸುತ್ತದೆ. ಏಕೆಂದರೆ, ಅಷ್ಟು ಕಾಲದ ಹಿಂದೆ ಪ್ರಸಾರವಾದ ಜ್ಯೋತಿಯು ಇನ್ನೂ ಪೂರ್ತಿ ಮುಗಿದಿಲ್ಲ.

ತಾರೆಗಳ ಚಲನಕ್ರಮವು ವಿಚಿತ್ರವಾಗಿದೆ. ಚಂದ್ರ ಮತ್ತು ಉಪಗ್ರಹಗಳು ಮುಖ್ಯ ಗ್ರಹಗಳನ್ನು ಸುತ್ತುತ್ತವೆ. ಕ್ಷೀರಪಥದಲ್ಲಿನ ಸೂರ್ಯನೂ, ಲಕ್ಷಾಂತರ ಇತರ ಸೂರ್ಯಸಮೂಹಗಳೂ ಒಂದು ಕೇಂದ್ರವನ್ನು ಪ್ರದಕ್ಷಿಣೆ ಮಾಡುತ್ತವೆ. ಕೋಟಿಕೋಟಿ ಇಂಥಾಕ್ಷೀರಪಥಗಳು ವಿಶ್ವದ ಕೇಂದ್ರವನ್ನು ಸುತ್ತುತ್ತವೆ. ವಿಶ್ವವು ಬೃಹದಾಕಾರದ ಒಂದು ಗಡಿಯಾರದಂತಿದೆ. ಎಲ್ಲಾ ನಕ್ಷತ್ರಗಳೂ ವ್ಯವಸ್ಥಾನುಸಾರವಾಗಿ ಸರ್ವದಾ ಕಾಲಗತಿಯಲ್ಲಿ ಚಲಿಸುತ್ತಲೇ ಇವೆ. ಸ್ವಲ್ಪವೂ ತಡವಿಲ್ಲ, ಸ್ವಲ್ಪವೂ ಆದ್ಯವಿಲ್ಲ, ಸ್ವಲ್ಪವೂ ತಪ್ಪಿಲ್ಲ, ಎಲ್ಲವೂ ಏಕ ಮತ, ಏಕತಾನದ ಐಕ್ಯದಿಂದ ಚಲಿಸುತ್ತವೆ. ಎಲ್ಗಿನ್ ನ್ಯಾಶನಲ್ ಕ್ಲಾಕ್ ಕಾರ್ಖಾನೆಯಲ್ಲಿ ಎರಡು ದೊಡ್ಡ ಗಡಿಯಾರಗಳನ್ನು ನಕ್ಷತ್ರಗಳ ಚಲನೆಗೆ ಅನುವರ್ತಿಸುವಂತೆ ವ್ಯವಸ್ಥಾಪಿಸಿದ್ದಾರೆ, ಅವುಗಳಿಂದ ಇತರ ಗಡಿಯಾರಗಳು ತೋರಿಸುವ ಕಾಲವನ್ನು ನಿಯಂತ್ರಿಸಲು ಸಾಧ್ಯವಾಗಿದೆ.

100 ಅಂಗುಲ ವ್ಯಾಸದ ದೂರದರ್ಶಕವು ಆಕಾಶ ಮಂಡಲದಲ್ಲಿ 60ಕೋಟಿ ಜ್ಯೋತಿರ್ವರ್ಷಗಳ ದೂರ ಪರಿಶೋಧಿಸಿದೆ. 200 ಅಂಗುಲ ವ್ಯಾಸದ ದೂರದರ್ಶಕವು ಖಗೋಳ ಶಾಸ್ತ್ರದಲ್ಲಿ ಮಹಾ ಪ್ರಳಯವನ್ನುಂಟು ಮಾಡಿದೆ. ಕೋಟಿಕೋಟಿ ಹೊಸ ಜಗತ್ತುಗಳನ್ನು ತೋರಿಸಿ, 12,000,000,000,000,000,000,000 ಮೈಲು ದೂರದ ನಕ್ಷತ್ರಗಳನ್ನು ಪತ್ತೆ ಮಾಡಿದೆ. ನಕ್ಷತ್ರಪುಂಜಗಳು ಲೆಕ್ಕವಿಲ್ಲದ ಸಂಖ್ಯೆಯಲ್ಲಿ, ಮೇರೆಯಿಲ್ಲದ ವಿಶ್ವದಲ್ಲಿ ಅನಂತಾನಂತವಾಗಿ ಪಸರಿಸಿವೆ

—

## ಕೊಡುಗೈ ಕಲಿಗಳು

"ಕಾಯಕದ ಒಂದು ಪಾಲನ್ನು ಸಮಾಜಕ್ಕೆ ಅರ್ಪಿಸುವ ಮನಸ್ಸು ಬೆಳೆಯಬೇಕು. ಈ ಅರ್ಪಣ ಭಾವನೆಯನ್ನೇ ನಮ್ಮ ಶರಣರು ಕೃತಿಯಲ್ಲಿ ತೋರಿಸಿದರು" ಹೀಗೆಂದು ಪರಮ ಪೂಜ್ಯ ಶ್ರೀ ಶ್ರೀಗಳವರು, ಶ್ರೀ ಕ್ಷೇತ್ರದ ಬೆಟ್ಟದ ಮೇಲಿರುವ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ದೇವಾಲಯ ಹಾಗೂ ಗೋಪುರ ನವೀಕರಣದ ಉದ್ಘಾಟನೆಯನ್ನು ದಿನಾಂಕ 9-2-78 ನೆಯ ಭಾನುವಾರದಂದು ನಡೆಸಿದ ಸಂದರ್ಭದಲ್ಲಿ ಸೇರಿದ್ದ ಭಕ್ತವೃಂದದವರನ್ನುದ್ದೇಶಿಸಿ ಅನುಗ್ರಹಿಸಿದ ಅಮೃತವಾಣಿಯಿದು.

'ದುಡಿಮೆಯೇ ಜೀವಿತದ ಶ್ರೀ ರಕ್ಷೆ' ದುಡಿಯ ಬೇಕು. ಆ ದುಡಿಮೆಯ ಸ್ವಲ್ಪಭಾಗವನ್ನು ಸದ್ವಿನಿಯೋಗಿಸಬೇಕು. ಆಗಲೇ ಆದುಡಿತಕ್ಕೂ ದುಡಿಯುವ ವ್ಯಕ್ತಿಗೂ ಒಂದು ನೆಲೆ ಬೆಲೆ. ಅಂತಹ ವ್ಯಕ್ತಿಗಳಿಗೆ ಸಮಾಜ ಗುರುತಿಸಿ ಗೌರವಿಸುತ್ತದೆ. ಅವರನ್ನು ಗೌರವಿಸುವುದು ಅರ್ಥವತ್ತಾಗಿರುತ್ತದೆ. ಅವರನ್ನೇ ತ್ಯಾಗಿಗಳು ದಾನಿಗಳು ಕೊಡುಗೈ ಕಲಿಗಳೆಂದು ಹೆಸರಿಸುತ್ತದೆ. ಅಂತಹ ಪರ ಪಂಕ್ತಿಯಲ್ಲಿ ಸೇರಿದವರು, ಬೆಂಗಳೂರಿನ ಇಂಜಿನಿಯರ್ ಮತ್ತು ಕಂಟ್ರಾಕ್ಟರ್ ಶ್ರೀ ಸಿ. ಶಿವರುದ್ರಪ್ಪನವರು.

ಶ್ರೀಯುತರು ಶ್ರೀ ಕ್ಷೇತ್ರದ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯವರ ದೇವಸ್ಥಾನದಲ್ಲಿ ಅಮೃತ ಶಿಲೆಯ ಹಾಸುವಿಕೆ ಮತ್ತು ಅಲಂಕಾರದ ಕೆಲಸವನ್ನು, ತಮ್ಮ ಮಾತಾ ಪಿತೃಗಳಾದ ಲಿಂಗೈಕ್ಯ ಶ್ರೀಮತಿ ಮುದ್ದಮ್ಮ ಮತ್ತು ಲಿಂಗೈಕ್ಯ ಶ್ರೀಮಾನ್ ಚೆನ್ನವೀರಪ್ಪನವರ ಪುಣ್ಯಸ್ಮರಣಾರ್ಥವಾಗಿ ಮಾಡಿಸಿಕೊಟ್ಟು ಸ್ವಾಮಿ ಕೃಪೆಗೆ ಪಾತ್ರರಾಗಿದ್ದಾರೆ. ಈ ಪುಣ್ಯ ಕಾರ್ಯಕ್ಕೆ ತಗುಲಿದ ವೆಚ್ಚ ಸು 40 ಸಾವಿರ ರೂಪಾಯಿಗಳು. ಶ್ರೀಯುತರಿಗೂ ಅವರ ಕುಟುಂಬದವರಿಗೂ ಆಯುರಾರೋಗ್ಯಾದಿಗಳನ್ನು ಕೊಟ್ಟು, ಇನ್ನೂ ಅನೇಕ ಪುಣ್ಯಕಾರ್ಯವನ್ನು ಮಾಡುವ ಚೈತನ್ಯವನ್ನು ದಯಾಮಯರಾದ ಶ್ರೀ ಸಿದ್ಧಲಿಂಗೇಶ್ವರರು ಅನುಗ್ರಹಿಸಲೆಂದು ಆಶಿಸುತ್ತೇವೆ.

( 13 ನೇ ಪುಟದಿಂದ )

ಆಕೆಯ ಕಣ್ಣುಗಳ ಮಿಂಚು ವಜ್ರಗಳ ಹೊಳಪನ್ನೂ ಮೀರಿಸಿದ್ದಿತು. ಕೋಪದಜ್ವಾಲೆ ಸಭೆಯನ್ನು ಸುಡುತ್ತಿದ್ದಿತು.

ಕೋವಲನು ನಿರಪರಾಧಿ ಎಂಬುದನ್ನು ಆ ಅಂದುಗೆಗಳು ತೋರಿಸಿಕೊಟ್ಟಿದ್ದುವು.

ಅರಸನಿಗಾದ ಅಳಲು ಅಷ್ಟಿಷ್ಟೆಂದು ಹೇಳತೀರದು. "ನಾನು ರಾಜನಾಗಿರಲು ಅರ್ಹನಲ್ಲ, ದಕ್ಷನೂ ಅಲ್ಲ. ಅಕ್ಕಸಾಲಿಗನ ಬೇಳುವೆಯ ಮಾತುಗಳನ್ನು ನಂಬಿ, ಸರಿಯಾಗಿ ವಿಚಾರ ಮಾಡದೆ ನಿರಪರಾಧಿಯಾದ ಕೋವಲನನ್ನು ಕೊಲ್ಲಿಸಿದೆ. ಈ ಮಹಾಸಾಧ್ವಿಯ ಐದೆತನದ ಭಾಗ್ಯವನ್ನು ಹಾಳು ಮಾಡಿದೆ. ನಾನಿನ್ನು ಬಾಳಿರಬಾರದು" ಎಂದು ಪರಿಪರಿಯಾಗಿ ಹಲುಬಿದನು.

ಕಣ್ಣಗಿ ಅಲ್ಲಿಂದ ಕಾಲ್ತೆಗೆದಳು. ಆಕೆಯ ರೋಷಜ್ವಾಲೆ ಇನ್ನೂ ಹೆಚ್ಚಾಗುತ್ತಲೇ ಇದ್ದಿತು. "ಅರಸನೂ ಈತನ ಅರಮನೆಯೂ, ಇವನ ರಾಜಧಾನಿಯೂ ಬೆಂದು ಬೂದಿಯಾಗಲಿ" ಎಂದು ಶಪಿಸಿದಳು. ಆಕೆಯ ಶಾಪ ಸುಳ್ಳಾಗಲಿಲ್ಲ.

ಎಷ್ಟೋ ಹೊತ್ತಾದಮೇಲೆ ಆಕೆಯ ರೋಷಜ್ವಾಲೆ ಶಾಂತವಾಯಿತು. ಆ ಕೂಡಲೇ ದೇಹವನ್ನು ತೊರೆದು ಆಕೆಯ ಜೀವ ತನ್ನ ಪತಿಯ ಜೀವದಲ್ಲಿ ಒಂದಾಯಿತು.

---

( 15 ನೇ ಪುಟದಿಂದ)

ಭಕ್ತವ್ರಾತ ಸುಮೂಹರ್ತದಲ್ಲಿ ಸರಪಳಿ ಹಿಡಿದು ತೇರೆಳೆಯಲು ಸಿದ್ಧವಾಗುತ್ತದೆ. ಶ್ರೀ ಶ್ರೀ ಗಳವರು ದಯಮಾಡಿಸಿ ಎಳೆದಾಗ ತೇರು ಮುಂಬರಿಯುತ್ತದೆ. ರಥದ ಮುಂದೆ ಧ್ವಜ ಕುಣಿತ, ವಾದ್ಯದ ಮೊಳಗು, ವಿವಿಧ ಜಾನಪದ ನೃತ್ಯ, ಶ್ರೀ ಶ್ರೀ ಗಳವರ ಜೊತೆ ಭಕ್ತರು ಭಾಗಿಯಾಗಿ ತೇರೆಳೆಯುವುದು; – ನಿಜಕ್ಕೂ ಈ ದೃಶ್ಯ ಅದ್ಭುತವಾದುದು ಅನ್ಯಾದೃಶ್ಯವಾದುದು. ನೆರೆದಿರುವವರೆಲ್ಲರೂ ಆ ಪುಣ್ಯಗಳಿಗೆಯಲ್ಲಿ ಅಲ್ಲಿ ಇಹದಿಂದ ಮುಕ್ತರು.

– ಶಿ –

ಶಿವರಾತ್ರಿಯಂದು ಮಾಡಿದ ದೃಢ ಸಂಕಲ್ಪರೂಪವಾದ ಆಚರಣೆಯ ಮೌಲ್ಯಗಳು ದಿನನಿತ್ಯದ ನಡೆನುಡಿಗಳಲ್ಲಿ ಮೈಗೂಡುವಂತಾಗಲಿ. ಈ ವರ್ಷದ ಮಹಾಶಿವರಾತ್ರಿಯು ಸರ್ವರಿಗೂ ಸನ್ಮಂಗಲವನ್ನುಂಟುಮಾಡಲಿ.

ತೇರು ಹರಿತೈತೆ ಸಿದ್ಗಂಗೆ ಶಿವನಾ।
ತಾರೊ ತಮ್ಮಯ್ಯ ದವನಾವ! ತಂಗೆನ್ನ
ಬೇಡಿಕೊಳೆ ಬಾಳೆಹಣ್ಣ ನೀ ಸೆರಗೊಡ್ಡ॥

---

( 21 ನೇ ಪುಟದಿಂದ )

ಹುಟ್ಟುವಾಗ ತರಲಿಲ್ಲ ಹೋಗ್ವಾಗ ಒಯ್ಲೂರೆ
ಸುಟ್ಟು ಸುಟ್ಟು ಸುಣ್ಣದ್ಹರಳಾಯ್ತು– ಈ ದೇಹ
ಕಷ್ಟವನು ಬಿಡಿಸೊ ಸೃಷ್ಟಿಯೊಡೆಯ.

ಇದು ಬದುಕಿನ ತಿರುಳು. ಬರುವಾಗ ತಾರದ ಈ ಐಹಿಕ ಸಂಪತ್ತು ಯಾವುದನ್ನೂ ಒಯ್ಯುವಂತಿಲ್ಲ. ಕಳ್ಳಸಾಗಾಣಿಕೆ ಮಾಡುವಂತಿಲ್ಲ. ಆದರೆ ಪಾಪಮಯವಾದ ಬದುಕಿನಲ್ಲಿ ನೀರಿಗೆ ಹಾಕಿದ ಸುಣ್ಣದ ಚಿಪ್ಪಿನಂತೆ ನರಳಿ ನರಳಿ ಅರಳಾಗಿ ಹೋದ ದೇಹಕ್ಕೆ ಸ್ವರ್ಗ-ನರಕ ಎರಡೂ ಭೂಮಿಯೇ. ಶರೀರದ ಮೂಲಕ ಸಕಲ ಸುಖಗಳ ಸವಿಯನ್ನು ಅನುಭವಿಸುವವ ಮಾತ್ರ ಜೀವಾತ್ಮ, ಹುಟ್ಟುತ್ತದೆ. ದೇಹ, ತಿನ್ನುತ್ತದೆ, ಮೋಸ ಮಾಡುತ್ತದೆ, ವ್ಯಭಿಚಾರ ಮಾಡುತ್ತದೆ, ಷಡ್ ವೈರಿಗಳನ್ನು ಅಸ್ತ್ರವಾಗಿ ಬಳಸಿ ಆಟವಾಡುತ್ತದೆ. ಆದರೆ ನಾಳೆಯ ಕಲ್ಪನೆ ಮನಸ್ಸಿನಲ್ಲಿರುವುದಿಲ್ಲ. ಯಾವಾಗ, ಎಂದು ಎನ್ನುವಂತಿಲ್ಲ. ಬರುತ್ತಾನೆ–

ಜವರಾಯ ಬಂದರೆ ಬರಿಗೈಲಿ ಬರಲಿಲ್ಲ
ಕುದುಗೋಲು ಕೊಡಲ್ಯೊಂದು––ಹೆಗಲೇರಿ
ಒಳ್ಳೊಳ್ಳೆಮರವ ಕಡಿ ಬಂದ—ಫಲ ಬಿಟ್ಟ ಮರವ ಕಡಿಬಂದ.

ಒಳ್ಳೊಳ್ಳೆ ಮರವ ಕಡಿ ಬಂದ— ಫಲ ಬಿಟ್ಟ ಮರವ ಕಡಿ ಬಂದ.

ಅವನಿಗೆ ನಿರ್ದಾಕ್ಷಿಣ್ಯ ಒಳ್ಳೆಯವರು, ಕೆಟ್ಟವರು ಸಣ್ಣವರೆಂಬ ಪಕ್ಷಪಾತ ಅವನಿಗಿಲ್ಲ. ಕೊಲ್ಲುವುದೊಂದೇ ಅವನ ಕೆಲಸ. ಆದರೆ ಸಂಸಾರ ಸಾಗರದಿಂದ ಹೀಗೆ ಮುಕ್ತಿ ಪಡೆದು ಅವನೊಂದಿಗೆ ಎಂದು ಹೋಗಬೇಕೆಂದು ಹೇಳುವಂತಿಲ್ಲ. ಅಂತೂ ಎಂದಾದರೂ ಹೋಗಬೇಕೆಂಬುದು ನಿಜ. ಅದರೊಳಗೆ ಪರಲೋಕದ ದಾರಿಬುತ್ತಿಯಾಗಿ ಒಯ್ಯಬೇಕಾದುದು ಶಿವಚಿಂತೆಯ ಹಾಲು ಪಾಯಸ ಮಾತ್ರ ಎನ್ನುತ್ತದೆ ಜನಪದ.

"SIDDAGANGA" Monthly, Sree Siddaganga Mutt. KRN Q-9
Registered with the Registrar of News papers for India under No. 17139/69

# ಕಸ್ತೂರಿ

## ಬಾರ್ ಸೋಪ್
## ನೀಲಂ ಸೋಪ್



**ಸ್ವಚ್ಛತೆ ಮತ್ತು ಪ್ರಕಾಶಮಾನವಾದ ಬಟ್ಟೆಗಳಿಗೆ**







ತಯಾರಕರು:
ಶ್ರೀ ರಾಮಕೃಷ್ಣ ಆಯಿಲ್ ಮಿಲ್ಸ್, ಮಂಗಳೂರು-575 003

maa SROM 142